**2. 9ನೇ ಪ್ರಕರಣದ ತಿದ್ದುಪಡಿ.-** ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 39) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 9ನೇ ಪ್ರಕರಣದಲ್ಲಿ, (2)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(3) ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯದ ಯಾವೊಬ್ಬ ನೌಕರನ ವಿರುದ್ಧ ಯಾವುದೇ ನಿರ್ದಿಷ್ಟ ವಿವಾದದೊಂದಿಗೆ ಸಂಬಂಧಿಸಿದ ಅಥವಾ ಅದಕ್ಕೆ ಪೂರಕವಾದ ಯಾವುದೇ ವಿಷಯದ ಸಂಬಂಧದಲ್ಲಿ ಮತ್ತು ವಿಶ್ವವಿದ್ಯಾಲಯವು ನಿರ್ವಹಿಸುತ್ತಿರುವ, ಆಡಳಿತ ನಡೆಸುತ್ತಿರುವ, ಮಾನ್ಯತೆ ನೀಡಿರುವ ಅಥವಾ ಅನುಮೋದನೆ ನೀಡಿರುವ ಯಾವುದೇ ಸಂಸ್ಥೆಯ ಕಟ್ಟಡಗಳು, ಪ್ರಯೋಗಾಲಯಗಳು, ಗ್ರಂಥಾಲಯಗಳು, ವಸ್ತು ಸಂಗ್ರಹಾಲಯಗಳು, ಕಾರ್ಯಾಗಾರಗಳು, ಸಾಧನ ಸಾಮಾಗ್ರಿಗಳ ನಿರ್ಮಾಣವನ್ನು ಒಳಗೊಂಡಂತೆ ಯಾವುದೇ ಅಕ್ರಮಗಳ ಸಂಬಂಧದಲ್ಲಿ ಹಾಗೂ ವಿಶ್ವವಿದ್ಯಾಲಯವು ನಡೆಸಿದ ಅಥವಾ ನಿರ್ವಹಿಸಿದ ಪರೀಕ್ಷೆಗಳು, ಬೋಧನೆ ಮತ್ತು ಮೌಲ್ಯಮಾಪನ ಹಾಗೂ ಇತರೆ ಕಾರ್ಯಗಳ ಅಕ್ರಮಗಳು ಹಾಗೂ ಇವುಗಳೊಂದಿಗೆ ಅಥವಾ ಇವುಗಳಿಗೆ ಪೂರಕವಾದ ಯಾವುದೇ ವಿಷಯದ ಸಂಬಂಧದಲ್ಲಿ ವಿಶ್ವವಿದ್ಯಾಲಯದ ಯಾವೊಬ್ಬ ನೌಕರನ ವಿರುದ್ಧ ಯಾವುದೇ ನಿರ್ದಿಷ್ಟ ಆಪಾದನೆಗಳ ಬಗ್ಗೆ ವಿಚಾರಣೆ ನಡೆಸಲು ಒಬ್ಬ ವಿಶೇಷಾಧಿಕಾರಿಯನ್ನು ಅಥವಾ ಒಬ್ಬರು ಅಥವಾ ಹೆಚ್ಚು ಜನರನ್ನು ಒಳಗೊಂಡ ವಿಚಾರಣಾ ಆಯೋಗವನ್ನು ನೇಮಕ ಮಾಡಬಹುದು.

(4) (3)ನೇ ಉಪಪ್ರಕರಣದ ಅಡಿಯಲ್ಲಿ ಪರಿವೀಕ್ಷಣೆ ಅಥವಾ ವಿಚಾರಣೆಯನ್ನು ಮಾಡಲು ನಿರ್ದೇಶಿಸಲಾದ ವಿಶೇಷ ಅಧಿಕಾರಿ ಅಥವಾ ಆಯೋಗವು ಆ ಉದ್ದೇಶಕ್ಕಾಗಿ ಸಂಬಂಧಪಟ್ಟ ಸಂಸ್ಥೆಗಳನ್ನು, ಆವರಣಗಳನ್ನು ಪ್ರವೇಶಿಸಲು ಮತ್ತು ಅಗತ್ಯವಾಗಬಹುದಾದ ಅಂಥ ಲೆಕ್ಕಪತ್ರಗಳನ್ನು ಅಥವಾ ಇತರ ದಾಖಲೆಗಳನ್ನು ಪರಿವೀಕ್ಷಿಸಲು ಅವಕಾಶವಿರತಕ್ಕದ್ದು.

(5) ವಿಶೇಷ ಅಧಿಕಾರಿ ಅಥವಾ ಆಯೋಗವು, ಪರಿವೀಕ್ಷಣೆಯ ಅಥವಾ ವಿಚಾರಣೆಯ ಫಲಿತಾಂಶದ ವರದಿಯನ್ನು ಕುಲಾಧಿಪತಿಗೆ ಸಲ್ಲಿಸತಕ್ಕದ್ದು ಮತ್ತು ಅದರ ಪ್ರತಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(6) ವರದಿಯನ್ನು ಸ್ವೀಕರಿಸಿದ ಕೂಡಲೇ ಕುಲಾಧಿಪತಿಯು, ಅದರ ಮೇಲೆ ತನ್ನ ತೀರ್ಮಾನಗಳನ್ನು ದಾಖಲಿಸತಕ್ಕದ್ದು ಮತ್ತು ಅವಶ್ಯಕವಾಗಬಹುದಾದ ಅಥವಾ ಅವರು ನಿರ್ದೇಶಿಸುವಂಥ ಮುಂದಿನ ಕ್ರಮ ಕೈಗೊಳ್ಳುವುದಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(7) ರಾಜ್ಯ ಸರ್ಕಾರವು, ವಿಚಾರಣೆಯ ಅಥವಾ ಪರಿವೀಕ್ಷಣೆಯ ವರದಿಯಲ್ಲಿಯ ತೀರ್ಮಾನಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ನಿರ್ದೇಶಿಸಿದಂಥ ಕ್ರಮ ಕೈಗೊಳ್ಳಲು ಪ್ರಾರಂಭಿಸುವಂತೆ ಕುಲಪತಿಗೆ ನಿರ್ದೇಶಿಸತಕ್ಕದ್ದು ಮತ್ತು ಕಾರ್ಯನಿರ್ವಾಹಕ ಪರಿಷತ್ತು ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಅನುಷ್ಠಾನಗೊಳಿಸತಕ್ಕದ್ದು.

(8) ಕುಲಪತಿಯು, ರಾಜ್ಯ ಸರ್ಕಾರದ ಆದೇಶಗಳಲ್ಲಿ ನಿರ್ದಿಷ್ಟಪಡಿಸಲಾದಂಥ ರಾಜ್ಯ ಸರ್ಕಾರದ ನಿರ್ದೇಶನಗಳನ್ನು ಪಾಲಿಸಿ ತಾನು ಕೈಗೊಂಡ ಕ್ರಮದ ಬಗ್ಗೆ ಒಂದು ವರದಿಯನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(9) ಕುಲಪತಿಯು, ರಾಜ್ಯ ಸರ್ಕಾರದ ತೀರ್ಮಾನಗಳನ್ನು ಪಾಲಿಸಲು ತಪ್ಪಿದಲ್ಲಿ, ಆಗ ಅದನ್ನು ಕುಲಾಧಿಪತಿಗೆ ವರದಿಮಾಡತಕ್ಕದ್ದು. ಇವರ ಆದೇಶವೇ ಅಂತಿಮವಾಗಿರತಕ್ಕದ್ದು ಹಾಗು ಕುಲಾಧಿಪತಿಯವರ ಆದೇಶಗಳಲ್ಲಿ ತಿಳಿಸಿರುವ ಅವಧಿಯೊಳಗೆ ಕುಲಪತಿ ಮತ್ತು ಕಾರ್ಯನಿರ್ವಾಹಕ ಪರಿಷತ್ತು ಅವುಗಳನ್ನು ಅನುಷ್ಠಾನಗೊಳಿಸತಕ್ಕದ್ದು."

**3. 9ಎ ಹೊಸ ಪ್ರಕರಣದ ಸೇರ್ಪಡೆ.-** ಮೂಲ ಅಧಿನಿಯಮದ 9ನೇ ಪ್ರಕರಣದ ತರುವಾಯ, ಈ ಮುಂದಿನ ಹೊಸ ಪ್ರಕರಣವನ್ನು ಸೇರಿಸತಕ್ಕದ್ದು, ಎಂದರೆ:-

**"9ಎ. ವಿಶ್ವವಿದ್ಯಾಲಯದ ಆದೇಶಗಳನ್ನು ರದ್ದುಗೊಳಿಸಲು ಅಧಿಕಾರ.-** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ, ಈ ಅಧಿನಿಯಮದ ಅಥವಾ ಪರಿನಿಯಮಗಳು, ವಿನಿಯಮಗಳು ಅಥವಾ ಆರ್ಡಿನೆನ್ಸ್‌ಗಳ ಉಪಬಂಧಗಳಿಗೆ ಸುಸಂಗತವಾಗಿಲ್ಲವೆಂದು ಅಥವಾ ಅನ್ಯಥಾ ರಾಜ್ಯಸರ್ಕಾರದ ಕಾರ್ಯನೀತಿಗೆ ಅಸಂಗತವಾಗಿದೆಯೆಂದು ತಾನು ಅಭಿಪ್ರಾಯಪಡುವ ಯಾವುದೇ ಆದೇಶ, ಅಧಿಸೂಚನೆ, ಠರಾವು ಅಥವಾ ಯಾವುವೇ ವ್ಯವಹರಣೆಗಳನ್ನು ರದ್ದುಗೊಳಿಸಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು ಮಾಡುವುದಕ್ಕೆ ಮೊದಲು, ರಾಜ್ಯ ಸರ್ಕಾರವು, ವಿಶ್ವವಿದ್ಯಾಲಯಕ್ಕೆ ಒಂದು ಅವಕಾಶವನ್ನು ಕೊಡತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿ ಹೊರಡಿಸಿದ ಪ್ರತಿಯೊಂದು ಆದೇಶವನ್ನು ಅದನ್ನು ಹೊರಡಿಸಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು."

**4. 13ನೇ ಪ್ರಕರಣದ ತಿದ್ದುಪಡಿ.-** ಮೂಲ ಅಧಿನಿಯಮದ 13ನೇ ಪ್ರಕರಣದಲ್ಲಿ (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(4ಎ) ಕುಲಪತಿಯನ್ನು, ಈ ಅಧಿನಿಯಮದ ಉಪಬಂಧಗಳನ್ನು ಉದ್ದೇಶಪೂರ್ವಕವಾಗಿ ಬಿಟ್ಟುಬಿಡುವ ಅಥವಾ ನೆರವೇರಿಸಲು ನಿರಾಕರಿಸುವ ಅಥವಾ ಅವನಲ್ಲಿ ನಿಹಿತವಾದ ಅಧಿಕಾರಗಳನ್ನು ದುರುಪಯೋಗ ಪಡಿಸಿಕೊಂಡ ಕಾರಣದ ಮೇಲೆ ಮತ್ತು ರಾಜ್ಯ ಸರ್ಕಾರವು, (4ಬಿ) ಉಪಪ್ರಕರಣದ ಅಡಿಯಲ್ಲಿ ಅದರಿಂದ ಆದೇಶಿಸಲಾದ ವಿಚಾರಣೆಯ ವರದಿಯನ್ನು ಪರಿಗಣಿಸಿದ ನಂತರ ಮತ್ತು ರಾಜ್ಯ ಸರ್ಕಾರವು ಸೂಚಿಸಿದ ಸಲಹೆಯ ಮೇಲೆ ಕುಲಾಧಿಪತಿಯು ಹೊರಡಿಸಿದ ಆದೇಶದ ಹೊರತು, ಪದದಿಂದ ತೆಗೆದುಹಾಕತಕ್ಕದ್ದಲ್ಲ.

(4ಬಿ) ಈ ಪ್ರಕರಣದ ಅಡಿಯಲ್ಲಿ ಒಂದು ವಿಚಾರಣೆಯನ್ನು ನಡೆಸುವ ಉದ್ದೇಶಕ್ಕಾಗಿ, ರಾಜ್ಯಸರ್ಕಾರವು, ಉಚ್ಚ ನ್ಯಾಯಾಲಯದ ಅಥವಾ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿರುವ ಅಥವಾ ಆಗಿದ್ದ ವ್ಯಕ್ತಿಯನ್ನು ನೇಮಕ ಮಾಡತಕ್ಕದ್ದು. ವಿಚಾರಣಾ ಪ್ರಾಧಿಕಾರವು, ಕುಲಪತಿಯು

ಮನವಿಯನ್ನು ಸಲ್ಲಿಸಲು ಅವಕಾಶ ನೀಡಿದ ನಂತರ ವಿಚಾರಣೆ ನಡೆಸತಕ್ಕದ್ದು ಮತ್ತು ವಿಧಿಸಬೇಕಾದ ಯಾವುದೇ ದಂಡನೆ ಇದ್ದರೆ, ಅದೂ ಒಳಗೊಂಡಂತೆ ಒಂದು ವರದಿಯನ್ನು ರಾಜ್ಯಸರ್ಕಾರಕ್ಕೆ ಸಲ್ಲಿಸತಕ್ಕದ್ದು ಮತ್ತು ರಾಜ್ಯಸರ್ಕಾರವು, ವರದಿಯನ್ನು ಪರಿಶೀಲಿಸಿದ ನಂತರ, ಕುಲಾಧಿಪತಿಗೆ ಸಲಹೆ ನೀಡತಕ್ಕದ್ದು. ಕುಲಾಧಿಪತಿಯು ಅಂಥ ಸಲಹೆಗೆ ಅನುಸಾರವಾಗಿ ಕ್ರಮ ಕೈಗೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**

ಸರ್ಕಾರದ ಕಾರ್ಯದರ್ಶಿ

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೩, ೨೦೧೪ (ಆಷಾಡ ೧೨, ಶಕ ವರ್ಷ ೧೯೩೬) | ನಂ. ೪೪೩ |
|---|---|---|
| Part – IV-A | Bangalore, Thursday, July 3, 2014 (Ashadha 12, Shaka Varsha 1936) | No. 443 |

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಇಡಿ 74 ಡಿಟಿಇ 2013, ಬೆಂಗಳೂರು, ದಿನಾಂಕ: 3ನೇ ಜುಲೈ, 2014**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012ರ (2013 ರ ಕರ್ನಾಟಕ ಅಧಿನಿಯಮ ಸಂಖ್ಯೆ:12) 17ನೇ ಪ್ರಕರಣದ (1) ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆಯ ನಿಯಂತ್ರಣ) ನಿಯಮಗಳು– 2013 ರ ಕರಡನ್ನು ಸದರಿ ಅಧಿನಿಯಮದ 17ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ ಅಧಿಸೂಚನೆ ಸಂಖ್ಯೆ: ಇಡಿ 74 ಡಿಟಿಇ 2013, ದಿನಾಂಕ: 28/05/2014ರಂದು ಈ ಮೂಲಕ ಪ್ರಕಟಿಸಿ, ಇದರಿಂದ ಬಾಧಿತರಾಗುವ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಿ, ಅವರುಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿವಸಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಸೂಚನೆಯನ್ನು ನೀಡಲಾಗಿತ್ತು.

ಅದರಂತೆ, ಸದರಿ ಕರಡು ನಿಯಮವು ರಾಜ್ಯಪತ್ರದಲ್ಲಿ ದಿನಾಂಕ: 28/05/2014ರಂದು ಪ್ರಕಟವಾಗಿರುತ್ತದೆ.

ಈ ಸಂಬಂಧವಾಗಿ ಸ್ವೀಕೃತವಾದ ಆಕ್ಷೇಪಣೆಗಳು ಮತ್ತು ಸಲಹೆಗಳನ್ನು ರಾಜ್ಯಸರ್ಕಾರವು ಪರಿಶೀಲಿಸಿದೆ. ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012ರ (2013 ರ ಕರ್ನಾಟಕ ಅಧಿನಿಯಮ ಸಂಖ್ಯೆ:12) 17ನೇ ಪ್ರಕರಣದ (1) ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯವು ಈ ಕೆಳಕಂಡ ನಿಯಮಗಳನ್ನು ಜಾರಿಗೆ ತಂದಿದೆ.

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು, ಅವು ಅಧಿಕೃತ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಈ ನಿಯಮಗಳಲ್ಲಿ,–

(ಎ) "ಅಧಿನಿಯಮ" ಎಂದರೆ ಕರ್ನಾಟಕ ಸಿವಿಲ್ ಸೇವೆಗಳ (ತಾಂತ್ರಿಕ ಶಿಕ್ಷಣ ಇಲಾಖೆಯ ಸಿಬ್ಬಂದಿಯ ವರ್ಗಾವಣೆ ನಿಯಂತ್ರಣ) ಅಧಿನಿಯಮ, 2012 (2013ರ ಕರ್ನಾಟಕ ಅಧಿನಿಯಮ 12);

(ಬಿ) "ಪ್ರಕರಣ" ಎಂದರೆ ಅಧಿನಿಯಮದ ಪ್ರಕರಣ;

(2) ಇದರಲ್ಲಿ ಬಳಸಲಾದ ಆದರೆ ಈ ನಿಯಮದಲ್ಲಿ ಪರಿಭಾಷಿಸಿರದ ಇತರ ಪದಗಳು ಮತ್ತು ಪದಾವಳಿಗಳು ಅಧಿನಿಯಮದಲ್ಲಿ, ಅವುಗಳಿಗೆ ಗೊತ್ತುಪಡಿಸಿದ ಅದೇ ಅರ್ಥವನ್ನು ಹೊಂದಿರತಕ್ಕದ್ದು.

**3. ಗಣಕೀಕೃತ ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಮಾಡಲು ವೇಳಾಪಟ್ಟಿಯ ಸಿದ್ಧತೆ.**– (1) ಗಣಕೀಕೃತ ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಮಾಡಲು ವೇಳಾಪಟ್ಟಿಯನ್ನು ಈ ಕೆಳಗಿನಂತೆ ಸಿದ್ಧಪಡಿಸತಕ್ಕದ್ದು,–

(i) ಮೊದಲನೆಯದಾಗಿ ಪ್ರಕರಣ 7ರನ್ವಯ ಹೆಚ್ಚುವರಿ ಸಿಬ್ಬಂದಿಯವರನ್ನು ಅಗತ್ಯವಿರುವ ಸಂಸ್ಥೆಗಳಿಗೆ ಮರು ನಿಯೋಜಿಸತಕ್ಕದ್ದು;

(ii) ಎರಡನೆಯದಾಗಿ ಅಧಿನಿಯಮದ 5ನೇ ಪ್ರಕರಣದಡಿ ಸಿಬ್ಬಂದಿಯವರ ವರ್ಗಾವಣೆಗಳು;

(iii) ಮೂರನೆಯದಾಗಿ ಸಾರ್ವಜನಿಕರಿಂದ ಸ್ವೀಕೃತವಾದ ದೂರುಗಳ ಮೇರೆಗೆ ಇಲಾಖಾ ವಿಚಾರಣೆಗೊಳಪಟ್ಟ ಪ್ರಕರಣಗಳ ವರ್ಗಾವಣೆಗಳು;

(iv) ನಾಲ್ಕನೆಯದಾಗಿ ಕೋರಿಕೆಯ ವರ್ಗಾವಣೆಗಳು;

(2) ದೂರು ಪ್ರಕರಣಗಳ ವರ್ಗಾವಣೆಗಳನ್ನು ಹೊರತುಪಡಿಸಿ ಮೇಲಿನ ಎಲ್ಲಾ ಹಂತದ ವರ್ಗಾವಣೆಗಳನ್ನು ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ಮಾಡತಕ್ಕದ್ದು.

(3) ದೂರು ಪ್ರಕರಣಗಳ ವರ್ಗಾವಣೆಗಳನ್ನು ಹೊರತುಪಡಿಸಿ ಉಳಿದಂತೆ ವರ್ಗಾವಣೆಗಳಿಗೆ ಕೆಳಕಂಡಂತೆ ವೇಳಾಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು,–

(ಎ) ಖಾಲಿ ಹುದ್ದೆಗಳ ಅಧಿಸೂಚನೆ;

(ಬಿ) ವರ್ಗಾವಣೆಗಳಿಗಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ಅರ್ಜಿಗಳನ್ನು ಸಲ್ಲಿಸಲು ಅಂತಿಮ ದಿನಾಂಕ;

(ಸಿ) ಸಂಬಂಧಪಟ್ಟ ಅಧಿಕಾರಿಗಳಿಂದ ಅರ್ಜಿ ಪರಿಶೀಲನೆ ಮತ್ತು ಪ್ರಮಾಣೀಕರಣ;

(ಡಿ) ತಾತ್ಕಾಲಿಕ ಆದ್ಯತಾ ಪಟ್ಟಿಯ ಪ್ರಕಟಣೆ;

(ಇ) ಆಕ್ಷೇಪಣೆಗಳನ್ನು ಸಲ್ಲಿಸಲು ಕೊನೆಯ ದಿನಾಂಕ;

(ಎಫ್) ಅಂತಿಮ ಆದ್ಯತಾ ಪಟ್ಟಿಯ ಪ್ರಕಟಣೆ;

(ಜಿ) ರಾಜ್ಯಮಟ್ಟದಲ್ಲಿ ಕೌನ್ಸಿಲಿಂಗ್;

**4. ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ವರ್ಗಾವಣೆ.–** ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳು ವರ್ಗಾವಣೆಗೆ ಅರ್ಹತೆ ಹೊಂದಲು ಒಂದು ವಲಯದಲ್ಲಿ ಪೂರ್ಣಗೊಳಿಸಬೇಕೆಂದು ಅಗತ್ಯಪಡಿಸಲಾದ ಕನಿಷ್ಠ ಸೇವಾವಧಿಯು ಅಧಿನಿಯಮದ 9ನೇ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಕೆಳಕಂಡ ಕೋಷ್ಟಕದಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು.

**ಕೋಷ್ಟಕ**

| ಕ್ರಮ ಸಂಖ್ಯೆ | ಹುದ್ದೆ ಪ್ರವರ್ಗ | ಒಂದು ವಲಯದಲ್ಲಿ ನಿಗದಿಪಡಿಸಲಾದ ಕನಿಷ್ಠ ಸೇವಾವಧಿ ವರ್ಷಗಳಲ್ಲಿ |
|---|---|---|
| 1. | ಗ್ರೂಪ್ 'ಎ' ಹುದ್ದೆಗಳು | 3 |
| 2. | ಗ್ರೂಪ್ 'ಬಿ' ಹುದ್ದೆಗಳು | 4 |
| 3. | ಗ್ರೂಪ್ 'ಸಿ' ಹುದ್ದೆಗಳು | 5 |
| 4. | ಗ್ರೂಪ್ 'ಡಿ' ಹುದ್ದೆಗಳು | 7 |

**5. ಖಾಲಿ ಹುದ್ದೆಗಳ ಅಧಿಸೂಚನೆ.–** ವಿಷಯವಾರು ಮತ್ತು ವೃಂದವಾರು ಅಗತ್ಯಕ್ಕೆ ತಕ್ಕಂತೆ ಲಭ್ಯವಿರುವ ಖಾಲಿ ಹುದ್ದೆಗಳ ಪ್ರಕಾರ ವರ್ಗಾವಣೆ ಮೇಲೆ ಭರ್ತಿ ಮಾಡಬೇಕಾದ ಖಾಲಿ ಹುದ್ದೆಗಳ ಪಟ್ಟಿಯನ್ನು ನಿರ್ಧರಿಸಿ ಇಲಾಖೆಯ ವೆಬ್‌ಸೈಟ್‌ನಲ್ಲಿ ಪ್ರಕಟಿಸತಕ್ಕದ್ದು ಹಾಗೂ ಸೂಚನಾ ಫಲಕದ ಮೇಲೆ ಪ್ರದರ್ಶಿಸತಕ್ಕದ್ದು. ಕೌನ್ಸಿಲಿಂಗ್ ಸಮಯದಲ್ಲಿ ಉಂಟಾದ ಖಾಲಿ ಹುದ್ದೆಗಳನ್ನು (consequential vacancies) ಸಹ ಖಾಲಿ ಹುದ್ದೆಗಳ ಪಟ್ಟಿಯಲ್ಲಿ ಸೇರಿಸತಕ್ಕದ್ದು ಮತ್ತು ಹಾಗೆ ಖಾಲಿ ಹುದ್ದೆಗಳು ಉಂಟಾದ ಕೂಡಲೇ ಗಣಕಯಂತ್ರದ ಪರದೆಯ ಮೇಲೆ ಪ್ರದರ್ಶಿಸತಕ್ಕದ್ದು.

**6. ವರ್ಗಾವಣೆಗಳಿಗಾಗಿ ಅರ್ಜಿಗಳು.–** (1) ವರ್ಗಾವಣೆಗಾಗಿ ಅರ್ಜಿಗಳನ್ನು ಸಲ್ಲಿಸಬೇಕಾದ್ದಲ್ಲಿ, ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ಹೊರಡಿಸಲಾಗುವ ನಿಗಧಿತ ನಮೂನೆಗಳಲ್ಲಿ ಆನ್‌ಲೈನ್ ಮೂಲಕ ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಅಲ್ಲದೇ, ಭರ್ತಿ ಮಾಡಿದ ಅರ್ಜಿಗಳನ್ನು ಡೌನ್‌ಲೋಡ್ ಮಾಡಿ ಅರ್ಜಿಯೊಂದಿಗೆ ಪೂರಕ ದಾಖಲೆಗಳನ್ನು ಲಗತ್ತಿಸಿ ಸಂಭಂಧಪಟ್ಟ ಸಂಸ್ಥೆಯ ಮುಖ್ಯಸ್ಥರಿಗೂ ಸಹ ನಿಗಧಿತ ಸಮಯದೊಳಗೆ ಸಲ್ಲಿಸತಕ್ಕದ್ದು.

(2) ಸಂಸ್ಥೆಯ ಮುಖ್ಯಸ್ಥರು, ಸೂಕ್ತ ಪರಿಶೀಲನೆಯ ನಂತರ ಸಂಬಂಧಪಟ್ಟ ಅರ್ಜಿಯನ್ನು ತಾಂತ್ರಿಕ ಶಿಕ್ಷಣ ನಿರ್ದೇಶಕರಿಗೆ ಕಳುಹಿಸತಕ್ಕದ್ದು;

(3) ಗ್ರೂಪ್ 'ಎ' ವೃಂದಕ್ಕೆ ಸೇರಿದ ಸಿಬ್ಬಂದಿಗಳ ಅರ್ಜಿಗಳನ್ನು ನಿರ್ದೇಶಕರ ಹಂತದಲ್ಲಿ ಪರಿಶೀಲಿಸಿ, ಸರ್ಕಾರಕ್ಕೆ ಕಳುಹಿಸಕೊಡತಕ್ಕದ್ದು;

(4) ಸಕ್ಷಮ ಪ್ರಾಧಿಕಾರದ ಸಂಬಂಧಪಟ್ಟ ಅಧಿಕಾರಿಗಳು ಅರ್ಜಿ ನಮೂನೆಗಳಲ್ಲಿ ಒದಗಿಸಲಾದ ವಿವರಗಳು ಸರಿಯಿದೆಯೇ ಎಂಬುದನ್ನು ಪರಿಶೀಲಿಸತಕ್ಕದ್ದು ಮತ್ತು ಪ್ರಮಾಣೀಕರಿಸತಕ್ಕದ್ದು;

(5) ವರ್ಗಾವಣೆಗಳಿಗಾಗಿ ಬಂದ ಅರ್ಜಿಗಳ ಪರಿಶೀಲನೆಯ ನಂತರ ದತ್ತಾಂಶವನ್ನು (Data) ಗಣಕೀಕರಿಸತಕ್ಕದ್ದು;

(6) 15ನೇ ನಿಯಮದಡಿ ವರ್ಗಾವಣೆ ಆದೇಶದನ್ವಯ ಬಿಡುಗಡೆಯಾದಂತಹ ಅರ್ಜಿದಾರರು ಈ ನಿಯಮದ–4ರ ಕೋಷ್ಟಕದಲ್ಲಿ ನಿಗಧಿಪಡಿಸಿದ ಕನಿಷ್ಠ ಸೇವಾವಧಿ ಪೂರೈಸುವವರೆಗೂ ವರ್ಗಾವಣೆಗೆ ಅರ್ಹರಾಗಿರತಕ್ಕದ್ದಲ್ಲ. (ಈ ಅಧಿನಿಯಮದ ಪ್ರಕರಣ–9ರ ಸಂದರ್ಭಗಳನ್ನು ಹೊರತುಪಡಿಸಿ);

**7. ಆಧ್ಯತಾ ಪಟ್ಟಿಯ ಸಿದ್ಧತೆ.–** (1) ಪರಿಶೀಲಿಸಿದ ಎಲ್ಲಾ ಅರ್ಜಿಗಳನ್ನು ಕೆಳಕಂಡ ಆದ್ಯತಾ ಕ್ರಮದಲ್ಲಿ ಸಿದ್ಧಪಡಿಸತಕ್ಕದ್ದು,–

(ಎ) ಅಧಿನಿಯಮದ 9ನೇ ಪ್ರಕರಣದ (iii) ನೇ ಖಂಡದ ಪ್ರಕಾರ ಜಿಲ್ಲಾ ಶಸ್ತ್ರವೈದ್ಯರು ಪ್ರಮಾಣೀಕರಿಸಲಾದಂತೆ ಶೇಕಡಾ 40ಕ್ಕಿಂತ ಹೆಚ್ಚಿನ ವಿಕಲಚೇತನರು/ಅಶಕ್ತತೆ ಇರುವ ಪ್ರಕರಣಗಳು;

(ಬಿ) ಅಧಿನಿಯಮದ 9ನೇ ಪ್ರಕರಣದ (iv) ನೇ ಖಂಡದ ಪ್ರಕಾರ ಅತ್ಯಂತ ತೀವ್ರ ಸ್ವರೂಪದ ಖಾಯಿಲೆಯಿಂದ ಬಳಲುತ್ತಿರುವ ಪ್ರಕರಣಗಳು;

(ಸಿ) ಅಧಿನಿಯಮದ 9ನೇ ಪ್ರಕರಣದ (ii) ನೇ ಖಂಡದ ಪ್ರಕಾರ ವಿಧವೆಯರ ಪ್ರಕರಣಗಳು;

(ಡಿ) ಅಧಿನಿಯಮದ 9ನೇ ಪ್ರಕರಣದ (i) ನೇ ಖಂಡದ ಪ್ರಕಾರ ಪತಿ–ಪತ್ನಿಯರಿಬ್ಬರೂ ಸರ್ಕಾರಿ ನೌಕರರಾಗಿರುವ ಪ್ರಕರಣಗಳು.

(ಇ) ಮುಂದಿನ ಎರಡು ವರ್ಷಗಳಲ್ಲಿ ನಿವೃತ್ತಿ ಹೊಂದಲಿರುವ ನೌಕರರ ಕೋರಿಕೆಗಳು;

(ಎಫ್) ಇತರೆ (ಸಾಮಾನ್ಯ)

ಪರಂತು, ಈ ನಿಯಮದ ಉದ್ದೇಶಕ್ಕಾಗಿ ಯಾವ ಅರ್ಜಿದಾರರ ಖಾಯಂ ಪೂರ್ವ/ ಪರಿವೀಕ್ಷಣಾ ಅವಧಿಯು ತೃಪ್ತಿಕರವಾಗಿ ಘೋಷಿಸಲ್ಪಟ್ಟಿರುವುದಿಲ್ಲವೋ ಅವರು ಪರಿಗಣನೆಗೆ ಅರ್ಹರಾಗಿರುವುದಿಲ್ಲ.

(3) ಅಧಿನಿಯಮ 9(1)ರ ಪ್ರಕಾರ ಪತಿ–ಪತ್ನಿಯರಿಬ್ಬರೂ ಸರ್ಕಾರಿ ನೌಕರರಾಗಿದ್ದು, ಅವರಲ್ಲಿ ಒಬ್ಬರು ಬೇರೆ ವಲಯದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಇನ್ನೊಬ್ಬರನ್ನು ಅದೇ ಸ್ಥಳಕ್ಕೆ ಅಥವಾ ಅವರು ಅದೇ ವಲಯದಲ್ಲಿದ್ದರೆ, ಸ್ಪಷ್ಟ ಖಾಲಿ ಸ್ಥಾನದ ಲಭ್ಯತೆಗೊಳಪಟ್ಟು ಹತ್ತಿರದ ಸ್ಥಳಕ್ಕೆ ವರ್ಗಾಯಿಸಬಹುದಾಗಿದೆ.

(4) ಸಕ್ಷಮ ಪ್ರಾಧಿಕಾರಿಗಳು, ಮೇಲೆ ವಿವರಿಸಲಾದಂತೆ ತಾತ್ಕಾಲಿಕ ಆದ್ಯತಾ ಪಟ್ಟಿಯನ್ನು ತಯಾರಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಸಲ್ಲಿಸಲು ಐದು ದಿನಗಳ ಕಾಲಾವಕಾಶ ನೀಡಿ ಸೂಚನಾ ಫಲಕದಲ್ಲಿ ಮತ್ತು ಇಲಾಖಾ ವೆಬ್ ಸೈಟಿನಲ್ಲಿ ಅಧಿಸೂಚಿಸತಕ್ಕದ್ದು. ಸಿಬ್ಬಂದಿಯವರಿಂದ ಆಕ್ಷೇಪಣೆಗಳನ್ನು ಸ್ವೀಕರಿಸಿದ ತರುವಾಯ ಅವುಗಳನ್ನು ಪರಿಶೀಲಿಸಿ ಅರ್ಹತೆಯ ಆಧಾರದ ಮೇಲೆ ಪರಿಗಣಿಸಬಹುದು ಅಥವಾ ತಿರಸ್ಕರಿಸಬಹುದು. ನಂತರ ಅಂತಿಮ ಆದ್ಯತಾ ಪಟ್ಟಿಯನ್ನು ಪ್ರಕಟಿಸತಕ್ಕದ್ದು.

**8. ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾಡಲಾಗುವ ವರ್ಗಾವಣೆಗೆ ಸಂಬಂಧಿಸಿದಂತೆ ಸಾಮಾನ್ಯ ಸೂಚನೆಗಳು.–** ಎಲ್ಲಾ ಸಿಬ್ಬಂದಿಗಳ ವರ್ಗಾವಣೆಗಳು ಮತ್ತು ಮರು ನಿಯೋಜನೆಗಳನ್ನು (redeployment) ಈ ಮುಂದಿನಂತೆ ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ಕೆಳಕಂಡಂತೆ ಮಾಡತಕ್ಕದ್ದು,–

(1) ಸಾಮಾನ್ಯ ವರ್ಗಾವಣೆಗಳನ್ನು ಪ್ರತಿ ವರ್ಷದ ಏಪ್ರಿಲ್ ಮತ್ತು ಮೇ ತಿಂಗಳುಗಳಲ್ಲಿ ಅಥವಾ ಸರ್ಕಾರವು ನಿಗಧಿ ಪಡಿಸುವ ದಿನಾಂಕದವರೆಗೆ ಮಾತ್ರ ಮಾಡತಕ್ಕದ್ದು; ಪರಂತು ಪ್ರಕರಣ 3ರಲ್ಲಿ ಪ್ರಾರಂಭಿಕ ನೇಮಕಾತಿಗೆ ಮತ್ತು ಬಡ್ತಿಯ ಮೇಲೆ ಮಾಡುವ ನೇಮಕಾತಿಗೆ ಇದು ಅನ್ವಯಿಸತಕ್ಕದ್ದಲ್ಲ

(2) ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸದಿರುವ ಸಿಬ್ಬಂದಿಗಳ ವರ್ಗಾವಣೆಗಳನ್ನು ಯಾವುದೇ ಸಂದರ್ಭಗಳಲ್ಲೂ ಮಾಡತಕ್ಕದ್ದಲ್ಲ;

(3) ಗ್ರೂಪ್ ಡಿ ನೌಕರರಿಗೆ ಅಂತರ್‌ಜಿಲ್ಲಾ ವರ್ಗಾವಣೆಗಳನ್ನು ಕರ್ನಾಟಕ ಸಿವಿಲ್ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ 16–ಎ ನಿಯಮದಲ್ಲಿ ಹೇಳಲಾದಂತೆ ಪರಿಗಣಿಸತಕ್ಕದ್ದು.

(4) ಸಕ್ಷಮ ಪ್ರಾಧಿಕಾರಿಯ ಪೂರ್ವಾನುಮತಿಯನ್ನು ಪಡೆಯದೆ ಹೆಚ್ಚುವರಿ ಹುದ್ದೆಗಳನ್ನು ಅಥವಾ ಹುದ್ದೆಗಳೊಂದಿಗೆ ಹೆಚ್ಚುವರಿ ಸಿಬ್ಬಂದಿಯವರನ್ನು ಮರು ನಿಯೋಜನೆ ಮಾಡತಕ್ಕದ್ದಲ್ಲ;

(5) ವಿಕಲಚೇತನರು/ದೈಹಿಕ ಅಶಕ್ತ ವ್ಯಕ್ತಿಗಳು ಜಿಲ್ಲಾ ವೈದ್ಯಾಧಿಕಾರಿಯವರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ಸಂಶಯಾತ್ಮಕ ಪ್ರಕರಣಗಳನ್ನು ಜಿಲ್ಲಾ ವೈದ್ಯಕೀಯ ಮಂಡಳಿಗೆ ಕಳುಹಿಸತಕ್ಕದ್ದು ಮತ್ತು ಜಿಲ್ಲಾ ವೈದ್ಯಕೀಯ ಮಂಡಳಿಯ ನಿರ್ಣಯವು ಅಂತಿಮವಾಗಿರತಕ್ಕದ್ದು;

(6) ವೃಂದ/ವಿಷಯವಾರು ಹುದ್ದೆಗಳಿಗೆ ಇತರೆ ವಿಷಯದ ಬೋಧಕ/ಕಾರ್ಯಾಗಾರ ಸಿಬ್ಬಂದಿಯನ್ನು ಭರ್ತಿ ಮಾಡತಕ್ಕದಲ್ಲ. ಸಿಬ್ಬಂದಿ ವ್ಯವಸ್ಥೆಯ ಪ್ರಕಾರ ಆಯಾ ವಿಷಯಗಳ ಉಪನ್ಯಾಸಕರು/ಕಾರ್ಯಾಗಾರ ಸಿಬ್ಬಂದಿಯವರು ಸಂಸ್ಥೆಗಳಲ್ಲಿ ಲಭ್ಯರಿದ್ದಾರೆಂಬುದನ್ನು ಸಕ್ಷಮ ಪ್ರಾಧಿಕಾರಿಗಳು ಸುನಿಶ್ಚಿತಪಡಿಸಿಕೊಳ್ಳತಕ್ಕದ್ದು;

(7) ಮ್ಯಾನ್ಯುಯಲ್ ಕೌನ್ಸಿಲಿಂಗ್ ಮೂಲಕ ವರ್ಗಾವಣೆಗಳನ್ನು ಮಾಡುವುದನ್ನು ನಿಷೇದಿಸಲಾಗಿದೆ. ಮ್ಯಾನ್ಯುಯಲ್ ಕೌನ್ಸಿಲಿಂಗ್ ಮೂಲಕ ವರ್ಗಾವಣೆಗಳನ್ನು ಮಾಡಿದರೆ, ಅವುಗಳನ್ನು 'ಅಕೃತ ಮತ್ತು ಶೂನ್ಯ' ವೆಂದು ಪರಿಗಣಿಸಲಾಗುವುದು ಮತ್ತು ಅಂಥ ವರ್ಗಾವಣೆಗಳಿಗೆ ಕಾರಣರಾದ ಅಧಿಕಾರಿಗಳು ಶಿಸ್ತು ಕ್ರಮಕ್ಕೆ ಒಳಗಾಗುವರು.

(8) ಒಟ್ಟು ಕೋರಿಕೆಯ ಮೇರೆಗಿನ ಮತ್ತು ಸಾರ್ವಜನಿಕ ಹಿತಾಸಕ್ತಿಯ ವರ್ಗಾವಣೆಗಳ ಸಂಖ್ಯೆ ಶೇ.8ಕ್ಕೆ ಮೀರದಂತೆ ಈ ಕೆಳಗಿನ ಶೇಕಡಾವಾರು ಪ್ರಮಾಣದಂತೆ ಮಾಡತಕ್ಕದ್ದು.

| ಕ್ರಮ ಸಂಖ್ಯೆ | ಪ್ರವರ್ಗ | ಶೇಕಡವಾರು ವರ್ಗಾವಣೆ |
|---|---|---|
| 1 | ಸಾಮಾನ್ಯ | 4.5% |
| 2 | ಪತಿ–ಪತ್ನಿ<br>(ಇಬ್ಬರು ಸರ್ಕಾರಿ ನೌಕರರು) | 2% |
| 3 | ವಿಧವೆ | 0.5% |
| 4 | ವಿಕಲಚೇತರರು | 0.5% |
| 5 | ಗಂಭೀರ ಸ್ವರೂಪದ ಖಾಯಿಲೆ | 0.5% |

ಮೇಲ್ಕಂಡ 2,3,4 ಮತ್ತು 5 ಪ್ರವರ್ಗಗಳಲ್ಲಿ ಅರ್ಹರಾದ ನೌಕರರು ಲಭ್ಯವಿರದಿದ್ದಲ್ಲಿ, ಸಕ್ಷಮ ಪ್ರಾಧಿಕಾರವು ಆ ವರ್ಗಗಳಿಗೆ ಮೀಸಲಿರಿಸಿದ್ದ ಶೇಕಡವಾರು ಸ್ಥಾನಗಳನ್ನು ಸಾಮಾನ್ಯ ಪ್ರವರ್ಗಕ್ಕೆ ಮರುಹೊಂದಾಣಿಕೆ ಮಾಡಿಕೊಳ್ಳತಕ್ಕದ್ದು.

**9. ಪ್ರಾಂಶುಪಾಲರು, ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯನ್ನು "ಪ್ರಥಮ" ನೇಮಕಾತಿ ಮಾಡುವ ವಿಧಾನ.–** ಅಧಿನಿಯಮದ ಪ್ರಕರಣ 3ರ ಪ್ರಕಾರ ತಾಂತ್ರಿಕ ಶಿಕ್ಷಣ ಇಲಾಖೆಯ ಯಾವುದೇ ಕಾಲೇಜು ಅಥವಾ ಸಂಸ್ಥೆಗೆ ಪ್ರಾಂಶುಪಾಲರು/ಬೋಧಕ/ಬೋಧಕೇತರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಯಾದ ಅಭ್ಯರ್ಥಿಗಳ ಪ್ರಥಮ ನೇಮಕಾತಿಯನ್ನು ಗಣಕೀಕೃತ ಕೌನ್ಸಿಲಿಂಗ್ ಮೂಲಕ ಮಾತ್ರ ಕೆಳಕಂಡಂತೆ ಮಾಡತಕ್ಕದ್ದು,–

(ಎ) ಕೌನ್ಸಿಲಿಂಗ್‌ಗೆ ಹಾಜರಾಗಲು ಅಭ್ಯರ್ಥಿಗಳಿಗೆ ಸೂಚನೆ;

(ಬಿ) ನೇಮಕಾತಿ ಪ್ರಾಧಿಕಾರವು ತುಂಬಬೇಕಾದ ಖಾಲಿ ಹುದ್ದೆಗಳ ಬಗ್ಗೆ ಅಧಿಸೂಚನೆ ಪ್ರಕಟಿಸುವುದು;

(ಸಿ) ಆಯ್ಕೆಯಾದ ಅಭ್ಯರ್ಥಿಗಳ ವಿದ್ಯಾರ್ಹತೆ ಮತ್ತಿತರ ದಾಖಲೆಗಳ ಪರಿಶೀಲನೆ;

(ಡಿ) ಆಯ್ಕೆ ಪಟ್ಟಿಯಲ್ಲಿರುವ ಕ್ರಮಾಂಕದ ಪ್ರಕಾರವೇ ಅಭ್ಯರ್ಥಿಗಳ ಕೌನ್ಸಿಲಿಂಗ್;

(ಇ) ಕೌನ್ಸಿಲಿಂಗ್‍ಗೆ ಅಭ್ಯರ್ಥಿಯು ಒಂದು ಪಕ್ಷ ಹಾಜರಾಗದೇ ಇದ್ದ ಪಕ್ಷದಲ್ಲಿ ಅಥವಾ ಸ್ಥಳ ಆಯ್ಕೆ ಮಾಡಿಕೊಳ್ಳುವಲ್ಲಿ ವಿಫಲವಾದಲ್ಲಿ, ನೇಮಕಾತಿ ಪ್ರಾಧಿಕಾರವು ಕೌನ್ಸಿಲಿಂಗ್‍ನ ಅಂತ್ಯದಲ್ಲಿ ಲಭ್ಯವಿರುವ ಖಾಲಿ ಹುದ್ದೆಗಳನ್ನು ಹಂಚಿಕೆ ಮಾಡತಕ್ಕದ್ದು;

(ಎಫ್) ನೇಮಕಾತಿ ಪ್ರಾಧಿಕಾರವು ಆಯ್ಕೆಗೊಂಡ ಅಭ್ಯರ್ಥಿಗಳಿಗೆ ಅಲ್ಲಿಯೇ ನೇಮಕಾತಿ ಮತ್ತು ಸ್ಥಳ ನಿಯುಕ್ತಿ ಆದೇಶ ಹೊರಡಿಸತಕ್ಕದ್ದು.

**10. ಗಣಕೀಕೃತ ಕೌನ್ಸಿಲಿಂಗ್ ಮೂಲಕ ವರ್ಗಾವಣೆ ಪ್ರಕ್ರಿಯೆ.–**

ಆಧ್ಯತಾ ಪಟ್ಟಿಯಲ್ಲಿರುವ ಅರ್ಜಿದಾರರಿಗೆ ಇಲಾಖಾ ವೆಬ್‍ಸೈಟ್, ಸಂಬಂಧಪಟ್ಟ ಇಲಾಖಾ/ಸಂಸ್ಥೆಗಳ ಸೂಚನಾ ಫಲಕಗಳಲ್ಲಿ ಪ್ರಕಟಣೆಗಳ ಮೂಲಕ ಕೌನ್ಸಿಲಿಂಗ್‍ಗಾಗಿ ನಿಗಧಿಪಡಿಸಿದ ದಿನಾಂಕಗಳ ಬಗ್ಗೆ ತಿಳಿಸತಕ್ಕದ್ದು. ಅರ್ಜಿದಾರರನ್ನು ಗೊತ್ತುಪಡಿಸಿದ ದಿನಾಂಕದಂದು ಅವರವರ ಆಧ್ಯತೆಯ ಕ್ರಮಾನುಸಾರ ಕೌನ್ಸಿಲಿಂಗ್‍ಗೆ ಕರೆಯತಕ್ಕದ್ದು ಮತ್ತು ತರುವಾಯ ಗಣಕಯಂತ್ರ ಪರದೆಯ ಮೇಲೆ ಪ್ರದರ್ಶಿತವಾಗಿರುವಂತೆ ಅಂಥ ಅವಧಿಯಲ್ಲಿ ಲಭ್ಯವಿರುವ ಹುದ್ದೆಗಳಲ್ಲಿ ಯಾವುದೇ ಒಂದನ್ನು ಆಯ್ಕೆ ಮಾಡಿಕೊಳ್ಳಲು ತಿಳಿಸತಕ್ಕದ್ದು.

**11. ಆದೇಶಗಳನ್ನು ಹೊರಡಿಸುವುದು.–**

ಸಕ್ಷಮ ಪ್ರಾಧಿಕಾರವು ಅರ್ಜಿದಾರನ ಆಯ್ಕೆಯಂತೆ ಆಗಲೇ ಮತ್ತು ಅಲ್ಲಿಯೇ ವರ್ಗಾವಣೆ ಆದೇಶವನ್ನು ಹೊರಡಿಸತಕ್ಕದ್ದು ಮತ್ತು ಖಾಲಿ ಹುದ್ದೆಗಳ ಪಟ್ಟಿಯಿಂದ ಆ ಖಾಲಿ ಹುದ್ದೆಯನ್ನು ತೆಗೆದುಹಾಕತಕ್ಕದ್ದು. ಒಂದು ಪ್ರತಿಯನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಕಳುಹಿಸತಕ್ಕದ್ದು ಮತ್ತು ಒಂದು ಪ್ರತಿಯನ್ನು ಅರ್ಜಿದಾರರಿಗೆ ನೀಡತಕ್ಕದ್ದು.

**12. ಕೌನ್ಸಿಲಿಂಗ್ ಅನ್ನು ಪೂರ್ಣಗೊಳಿಸುವುದು.–**

ಆಯಾ ದಿನದ ವರ್ಗಾವಣೆಯ ಕೌನ್ಸಿಲಿಂಗ್ ಅನ್ನು ವರ್ಗಾವಣೆಗಳ ಸಂಖ್ಯೆಯ ಗರಿಷ್ಠ ಮಿತಿಯನ್ನು ತಲುಪುವವರೆಗೆ ಅಥವಾ ಸಕ್ಷಮ ಪ್ರಾಧಿಕಾರಿಯು ತಿಳಿಸಿದ ನಿಗಧಿತ ಸಮಯದೊಳಗೆ ಎಲ್ಲಾ ಅರ್ಜಿದಾರರ ಪ್ರಕರಣಗಳು ಸಂಪೂರ್ಣವಾಗಿ ಮುಗಿಯುವವರೆಗೆ ಮುಂದುವರಿಸತಕ್ಕದ್ದು.

**13. ಸೂಚನಾ ಫಲಕದ ಮೇಲೆ ಪ್ರದರ್ಶಿಸುವುದು.–**

ವರ್ಗಾವಣೆ ಮಾಡಲಾದ ನೌಕರರ ಪಟ್ಟಿಯನ್ನು, ಅವರ ಹೆಸರುಗಳ ಮುಂದೆ ವರ್ಗಾವಣೆಯ ಸ್ಥಳಗಳನ್ನು ಸೂಚಿಸಿ ಸೂಚನಾ ಫಲಕದ ಮೇಲೆ ಸಹ ಪ್ರದರ್ಶಿಸತಕ್ಕದ್ದು. ಈ ಪಟ್ಟಿಯನ್ನು ಪ್ರದರ್ಶಿಸಿದ ತರುವಾಯ ಯಾವುದೇ ವರ್ಗಾವಣೆಗಳನ್ನು ಮಾಡಲಾಗಿದ್ದರೆ, ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಯನ್ನು ವೈಯಕ್ತಿಕವಾಗಿ ಹೊಣೆಗಾರರನ್ನಾಗಿ ಮಾಡತಕ್ಕದ್ದು ಮತ್ತು ಅವರ ವಿರುದ್ಧ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳತಕ್ಕದ್ದು.

**14. ಬಿಡುಗಡೆ.–**

ವರ್ಗಾವಣೆ ಆದೇಶಗಳನ್ನು ಪಡೆದ ನೌಕರರ ವಿವರಗಳನ್ನು ಪರಿಶೀಲಿಸಿದ ನಂತರವಷ್ಟೇ ಸಕ್ಷಮ ಪ್ರಾಧಿಕಾರವು/ಸಂಸ್ಥೆಯ ಮುಖ್ಯಸ್ಥರು ಸದರಿ ನೌಕರರನ್ನು ಬಿಡುಗಡೆಗೊಳಿಸತಕ್ಕದ್ದು.

**15. ಇಲಾಖಾ ಮುಖ್ಯಸ್ಥರ/ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಅಧಿಕಾರಗಳು.–**

ಕೆಳಕಂಡ ಸಂದರ್ಭಗಳಲ್ಲಿ ಮಾತ್ರ ವರ್ಷದ ಅನ್ಯ ಅವಧಿಯಲ್ಲಿ ಗ್ರೂಪ್ 'ಬಿ' 'ಸಿ' ಮತ್ತು 'ಡಿ' ನೌಕರರ ವರ್ಗಾವಣೆಯನ್ನು ಮಾಡಲು ಇಲಾಖಾ ಮುಖ್ಯಸ್ಥರಿಗೆ ಮತ್ತು ಗ್ರೂಪ್ 'ಎ' ನೌಕರರ ವರ್ಗಾವಣೆಯನ್ನು ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಅಧಿಕಾರ ನೀಡಲಾಗಿದೆ, ಅಂದರೆ:–

(ಎ) ಅಮಾನತ್ತಿನ ಬದಲಾಗಿ ಶಿಸ್ತು/ಕ್ರಿಮಿನಲ್ ಕ್ರಮ ತೆಗೆದುಕೊಳ್ಳುವ ಸಂದರ್ಭದಲ್ಲಿ;

(ಬಿ) ಬಡ್ತಿಯ ಪರಿಣಾಮವಾಗಿ ಉಂಟಾಗುವ ಸಂದರ್ಭದಲ್ಲಿ;

(ಸಿ) ಸಂಸ್ಥೆಗಳಲ್ಲಿ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿ ಶೇಕಡ 50ಕ್ಕಿಂತ ಕಡಿಮೆ ಕೊರತೆ ಇದ್ದಲ್ಲಿ/ಮರುನಿಯೋಜನೆಯ ಪರಿಣಾಮವಾಗಿ ಉಂಟಾಗುವ ಸಂದರ್ಭದಲ್ಲಿ;

(ಡಿ) 180 ದಿನಗಳಿಗೆ ಮೀರಿ ಅನಧಿಕೃತವಾಗಿ ಗೈರುಹಾಜರಾದ ನೌಕರನು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಹಿಂತಿರುಗಿದ ಸಂದರ್ಭದಲ್ಲಿ/ಆ ಹುದ್ದೆಯನ್ನು ಶೈಕ್ಷಣಿಕ ಹಿತದೃಷ್ಟಿಯಿಂದ ತುಂಬಿದ್ದ ಪಕ್ಷದಲ್ಲಿ, ಕಾರ್ಯನಿರ್ವಹಿಸುತ್ತಿರುವ ನೌಕರನನ್ನು ತೆರವುಗೊಳಿಸದೇ ಗೈರುಹಾಜರಾದ ನೌಕರನನ್ನು ಲಭ್ಯವಿರುವ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಬೇಕಾದ ಸಂದರ್ಭದಲ್ಲಿ;

(ಇ) ಯಾವುದೇ ಸಂಸ್ಥೆಯನ್ನು ಹೊಸದಾಗಿ ಆರಂಭಿಸಿದ ಸಂದರ್ಭದಲ್ಲಿ ಸೃಜಿಸಿದ ಹುದ್ದೆಗಳು, ತುರ್ತು ಸಂದರ್ಭದಲ್ಲಿ ಆಡಳಿತಾತ್ಮಕ ದೃಷ್ಟಿಯಿಂದ ತುಂಬಬೇಕಾದ ಸಂದರ್ಭದಲ್ಲಿ;

(ಎಫ್) ಭಾರತ ಚುನಾವಣೆ ಆಯೋಗ/ ರಾಜ್ಯ ಚುನಾವಣೆ ಆಯೋಗದ ಸೂಚನೆಯನ್ನು ಪಾಲಿಸುವ ಸಲುವಾಗಿ, ನೌಕರನ ವರ್ಗಾವಣೆ ಅಗತ್ಯವಿದ್ದ ಸಂದರ್ಭದಲ್ಲಿ.

**16. ಅಧಿಕಾರಿಗಳ ಹೊಣೆಗಾರಿಕೆ.–**

ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರವು ವರ್ಗಾವಣೆಗಳನ್ನು ಮಾಡುವಾಗ ಮೇಲಿನ ನಿಯಮಗಳನ್ನು ಪಾಲಿಸಲಾಗಿದೆಯೆಂಬುದನ್ನು ಖಾತರಿಪಡಿಸಿಕೊಳ್ಳತಕ್ಕದ್ದು ಮತ್ತು ಯಾವುದೇ ಉಲ್ಲಂಘನೆಗೆ ಅವರನ್ನು ವೈಯಕ್ತಿಕವಾಗಿ ಹೊಣೆಗಾರರನ್ನಾಗಿ ಮಾಡತಕ್ಕದ್ದು ಮತ್ತು ಅವರ ವಿರುದ್ಧ ಕಠಿಣ ಶಿಕ್ಷೆ ವಿಧಿಸುವ ನಿಟ್ಟಿನಲ್ಲಿ ಶಿಸ್ತಿನ ಕ್ರಮ ಜರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಜುಲೈ ೩, ೨೦೧೪ (ಆಷಾಡ ೧೨, ಶಕ ವರ್ಷ ೧೯೩೬) | ನಂ. ೪೪೫ |
|---|---|---|
| **Part – IV-A** | **Bangalore, Thursday, July 3, 2014 (Ashadha 12, Shaka Varsha 1936)** | **No. 445** |

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಕವಿಪ:ಶಾರಶಾ:295:ವಿಪಮುಸ:2014, ಬೆಂಗಳೂರು, ದಿನಾಂಕ: 3ನೇ ಜುಲೈ, 2014**

ಕರ್ನಾಟಕ ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರಾದ ಡಾ: ಎ.ಹೆಚ್. ಶಿವಯೋಗಿಸ್ವಾಮಿ ಅವರ ಅಧಿಕಾರಾವಧಿಯು 30ನೇ ಜೂನ್, 2014ರ ಅಪರಾಹ್ನದಂದು ಮುಕ್ತಾಯಗೊಂಡಿರುತ್ತದೆ.

ವಿ. ಶ್ರೀಶ್
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

**KARNATAKA LEGISLATIVE COUNCIL SECRETARIAT**

**NOTIFICATION**

**No. KLC/Legn/295/OCW/2014, Bangalore, Dated 3rd July, 2014**

The Office held by Dr. A.H. Shivayogiswamy as Chief Whip of the Opposition Party, Karnataka Legislative Council is ceased with effect from afternoon of 30th June, 2014.

**V. SHREESH**
Secretary
Karnataka Legislative Council

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಜುಲೈ ೪, ೨೦೧೪ (ಆಷಾಡ ೧೩, ಶಕ ವರ್ಷ ೧೯೩೬) | ನಂ. ೪೪೬ |
|---|---|---|
| **Part – IV-A** | **Bangalore, Friday, July 4, 2014 (Ashadha 13, Shaka Varsha 1936)** | **No. 446** |

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಕವಿಪ:ಶಾರಶಾ:295:ವಿಪಮುಸ:2014, ಬೆಂಗಳೂರು, ದಿನಾಂಕ: 4ನೇ ಜುಲೈ, 2014**

ಕರ್ನಾಟಕ ವಿಧಾನ ಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ತಿದ್ದುಪಡಿ) ಅಧಿನಿಯಮ 2009ರ ಪ್ರಕರಣ 3 (ಸಿಸಿಸಿ) ರೀತ್ಯಾ ವಿಧಾನ ಪರಿಷತ್ತಿನ ಮಾನ್ಯ ವಿರೋಧ ಪಕ್ಷದ ನಾಯಕರು, ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಗಣೇಶ್ ಕಾರ್ಣಿಕ್‌ರವರನ್ನು ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರನ್ನಾಗಿ ಹೆಸರಿಸಿರುವ ಕಾರಣ ದಿನಾಂಕ: 04.07.2014 ರಿಂದ ಜಾರಿಗೆ ಬರುವಂತೆ ಶ್ರೀ ಗಣೇಶ್ ಕಾರ್ಣಿಕ್‌ರವರನ್ನು ವಿಧಾನ ಪರಿಷತ್ತಿನ ವಿರೋಧ ಪಕ್ಷದ ಮುಖ್ಯ ಸಚೇತಕರನ್ನಾಗಿ ನೇಮಕ ಮಾಡಲಾಗಿದೆ.

ವಿ. ಶ್ರೀಶ್
ಕಾರ್ಯದರ್ಶಿ
ಕರ್ನಾಟಕ ವಿಧಾನ ಪರಿಷತ್ತು

## KARNATAKA LEGISLATIVE COUNCIL SECRETARIAT

## NOTIFICATION

### No. KLC/Legn/295/OCW/2014, Bangalore, Dated 4th July, 2014

Sri Ganesh Karnik, Member of Karnataka Legislative Council has been designated as Chief Whip of the Opposition party in Legislative Council by the Hon'ble Leader of Opposition in Legislative Council under Sec.3(ccc) of the Karnataka Legislature Salaries, Pensions and Allowances (Amendment) Act, 2009. In view of this, Sri Ganesh Karnik has been appointed as the Chief Whip of the Opposition Party in Legislative Council with effect from 4th July, 2014.

**V. SHREESH**
Secretary
Karnataka Legislative Council

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – **IV-A** | ಬೆಂಗಳೂರು, ಶನಿವಾರ, ಜುಲೈ ೫, ೨೦೧೪ (ಆಷಾಡ ೧೪, ಶಕ ವರ್ಷ ೧೯೩೬) | ನಂ. ೪೪೭ |
| **Part – IV-A** | **Bangalore, Saturday, July 5, 2014 (Ashadha 14, Shaka Varsha 1936)** | **No. 447** |

## REVENUE SECRETARIAT

## NOTIFICATION

### No. RD 28 LGP 2013, Bangalore, Dated 4th July, 2014

The draft of the following rules further to amend the Karnataka Land Revenue Rules, 1966 which the Government of Karnataka proposes to make in exercise of the powers conferred by sub-section (1) of section 197 of the Karnataka Land Revenue Act, 1964 (Karnataka Act 12 of 1964) is hereby published as required by said section for the information of all persons likely to be affected thereby and notice is hereby given that the said draft will be taken into consideration after expiry of fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above, will be considered by the State Government. Objections or suggestions may be addressed to the Principal Secretary to Government, Revenue Department, V floor, III Stage, Multi-storied Building, Dr. B.R. AmbedkarVeedhi, Banglaore – 560 001.

**DRAFT RULES**

**1. Title and Commencement.-** (1) These rules may be called the Karnataka Land Revenue (Amendment) Rules, 2014.

(2) They shall come into force from the date of their publication in the Official Gazette.

**2. Amendment of Rule 119.-** In rule 119 of the Karnataka Land Revenue Rules, 1966 in sub-rule (2), for the words and figures "Eighteen months from 07.12.2012 to 06.06.2014", the words and figures **"Twenty one months from 07.12.2012 to 06.09.2014"** shall be substituted.

By Order and in the name of the Governor of Karnataka,

**UMADEVI**
Under Secretary to Government
Revenue Department (Land Grants-1)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೮, ೨೦೧೪ (ಆಷಾಡ ೧೭, ಶಕ ವರ್ಷ ೧೯೩೬) | ನಂ. ೪೪೯ |
|---|---|---|
| **Part – IV-A** | **Bangalore, Tuesday, July 8, 2014 (Ashadha 17, Shaka Varsha 1936)** | **No. 449** |


## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ:ನಅಇ 162 ಎಂಎಲ್ಆರ್ 2013, ಬೆಂಗಳೂರು, ದಿನಾಂಕ:08–07–2014.**

ಸರ್ಕಾರದ ಮಾರ್ಗಸೂಚಿ ಸಂಖ್ಯೆ:ನಅಇ 240 ಎಂಎಲ್ಆರ್ 2013 ದಿನಾಂಕ:18.12.2013 ರಲ್ಲಿ ಸ್ಪಷ್ಟಪಡಿಸಿರುವಂತೆ, ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 13 ರನ್ವಯ (Karnataka Act 22 of 1964) ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಗೆ ವಾರ್ಡ್‌ವಾರು ಮೀಸಲಾತಿಯನ್ನು ನಿಗಧಿಪಡಿಸಿ ಕರಡು ಅಧಿಸೂಚನೆ ಸಂಖ್ಯೆ:ನಅಇ 162 ಎಂಎಲ್ಆರ್ 2013 ದಿನಾಂಕ:29–05–2014ನ್ನು ಕರ್ನಾಟಕ ವಿಶೇಷ ರಾಜ್ಯ ಪತ್ರ ಭಾಗ–IV-A ರಲ್ಲಿ ದಿನಾಂಕ:29.05.2014ರಂದು ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ 7 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಲಿಖಿತ ಮೂಲಕ ಆಹ್ವಾನಿಸಲಾಗಿತ್ತು. ಸದರಿ ರಾಜ್ಯಪತ್ರವನ್ನು ದಿನಾಂಕ:29.05.2014ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗಿದೆ.

ನಿಗಧಿತ ಅವಧಿಯಲ್ಲಿ ಕೆಲವೊಂದು ಸಲಹೆಗಳು/ಆಕ್ಷೇಪಣೆಗಳು ಸ್ವೀಕೃತವಾಗಿದ್ದು, ಸದರಿ ಸಲಹೆ/ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿದೆ.

ಆದ್ದರಿಂದ ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 13 ರನ್ವಯ (Karnataka Act 22 of 1964) ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜೋಗ್–ಕಾರ್ಗಲ್ ಪಟ್ಟಣ ಪಂಚಾಯಿತಿಗೆ ವಾರ್ಡ್‌ವಾರು ಮೀಸಲಾತಿಯನ್ನು ಈ ಕೆಳಕಂಡಂತೆ ನಿಗಧಿಪಡಿಸಿದೆ.

1. **ಜೋಗ್–ಕಾರ್ಗಲ್** ಪಟ್ಟಣ ಪಂಚಾಯಿತಿಯ ವಾರ್ಡುಗಳ ಸಂಖ್ಯೆ: **11 (ಹನ್ನೊಂದು)**
2. ಪ್ರತಿ ವಾರ್ಡುಗಳ ವಿಸ್ತೀರ್ಣದ ವಿವರವನ್ನು ಅನುಬಂಧದ ಕಲಂ 4 ರಲ್ಲಿ ವಿವರಿಸಿದೆ.
3. ಪ್ರತಿ ವಾರ್ಡಿಗೆ ತಲಾ ಒಂದು ಸ್ಥಾನವನ್ನು ಮೀಸಲಿಡಲಾಗಿದೆ.
4. ಪ್ರತಿ ವಾರ್ಡಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಹಿಂದುಳಿದ ವರ್ಗ / ಸಾಮಾನ್ಯ ಸ್ಥಾನವನ್ನು ಮತ್ತು ಆಯಾ ವರ್ಗದ ಮಹಿಳೆಯರ ಸ್ಥಾನವನ್ನು ಈ ಅಧಿಸೂಚನೆಯ ಅನುಬಂಧದಲ್ಲಿ ನಿಗದಿಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ಧಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

### ಅನುಬಂಧ

**ಪಟ್ಟಣ ಪಂಚಾಯಿತಿ ಜೋಗ–ಕಾರ್ಗಲ್ ವಾರ್ಡ್‌ವಾರು ವಿವರ ಹಾಗೂ ಮೀಸಲಾತಿ**

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| 1 | ಜೋಗ್–ಕಾರ್ಗಲ್–1 | ಉತ್ತರ: ಶರಾವತಿ ನದಿ ದಂಡೆ ಮತ್ತು ವಾರ್ಡ ನಂ.02 ರ ಗಡಿ<br>ದಕ್ಷಿಣ: ಕರುಮನೆ ಗ್ರಾಮ ಮತ್ತು ಲಿಂಗನಮಕ್ಕಿ ಗ್ರಾಮದ ಗಡಿ<br>ಪೂರ್ವ: ಶರಾವತಿ ನದಿಯ ದಂಡೆ ಲಿಂಗನಮಕ್ಕಿ ಅಣೆಕಟ್ಟು ಮತ್ತು ಹೆಬ್ಬೈಲು ಗ್ರಾಮ (ಇಡುವಾಣಿ) ದ ಗಡಿ | ಲಿಂಗನಮಕ್ಕಿ ಗ್ರಾಮದ ಲಿಂಗನ ಮಕ್ಕಿ ಅಣೆಕಟ್ಟಿನ ಕ್ರಸ್ಟ್ ಗೇಟ್ ನಿಂದ ಆರಂಭವಾಗಿ ವಾಯುವ್ಯ ಮುಖವಾಗಿ ಶರಾವತಿ ನದಿಯ ಅಂಚಿನ ಉದ್ದಕ್ಕೂ ಸಾಗಿ ಎಡಭಾಗದ (ದಕ್ಷಿಣ) ಪ್ರದೇಶವನ್ನು ಒಳಗೊಂಡ ಚೈನಾಗೇಟ್ ನಿಂದ ಪಶ್ಚಿಮಕ್ಕೆ ತಿರುಗಿ ಬೈಪಾಸ್ ರಸ್ತೆಯ ವೃತ್ತದಲ್ಲಿ ದಕ್ಷಿಣಕ್ಕೆ ತಿರುಗಿ ಸಾಗರದಿಂದ ಕಾರ್ಗಲ್‌ಗೆ ಬರುವ ಮುಖ್ಯರಸ್ತೆಯ ಮೂಲಕ ನೈರುತ್ಯಕ್ಕೆ ಸಾಗಿ ಚೌಡೇಶ್ವರಿ ವೃತ್ತದ ಮೂಲಕ ಎಡಭಾಗದ ಪ್ರದೇಶವನ್ನು ಒಳಗೊಂಡು ಬಟ್ಕಳ್ ವೃತ್ತಕ್ಕೆ ಸೇರಿ ದಕ್ಷಿಣಾಭಿಮುಖವಾಗಿ ಚಲಿಸಿ ಪವರ್ ಚಾನಲ್ ಒಳಗೊಂಡಂತೆ ಮೂಲೆ ಮನೆ ವೃತ್ತದ ಕರುಮನೆ ಮತ್ತು ಬಿದೂರೂರು ಗಡಿಯಚ್ಚಿನಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಎಡಭಾಗದ ಕುಳಕಾರು ಮತ್ತು ಮಳಲಿ ಪ್ರದೇಶ ಒಳಗೊಂಡಂತೆ ಲಿಂಗನಮಕ್ಕಿ ಗ್ರಾಮದ ಸ.ನಂ.73 ಪೂರ್ವದ ಅಂಚಿನ ಮೂಲಕ | ಪರಿಶಿಷ್ಟ ಜಾತಿ (ಮಹಿಳೆ) |

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| | | ಪಶ್ಚಿಮ: ಕರುಮನೆ ಗ್ರಾಮ (ಕಾಳಮಂಜಿ)ದ ಮತ್ತು ವಾರ್ಡ ನಂ.02ರ ಗಡಿ | ಲಿಂಗನಮಕ್ಕಿ ವಿದ್ಯುದಾಗಾರ ಬಳಸಿಕೊಂಡ ಲಿಂಗನಮಕ್ಕಿ ಅಣೆಕಟ್ಟಿನ ಆಗ್ನೇಯ ತುದಿಗೆ ಬಂದು ನಂತರ ಈಶಾನ್ಯಾಭಿಮುಖವಾಗಿ ಚಲಿಸಿ, ಅಣೆಕಟ್ಟಿನ ಕ್ರೇಸ್ಟ್ ಗೇಟ್ ತಲುಪುತ್ತದೆ. | |
| 2 | ಜೋಗ್–ಕಾರ್ಗಲ್–2 | ಉತ್ತರ: ಕಾರ್ಗಲ್ ಮಸೀದಿ ರಸ್ತೆ ಮತ್ತು ವಾರ್ಡ ನಂ.03ರ ಗಡಿ<br>ದಕ್ಷಿಣ: ಸಾಗರದಿಂದ ಕಾರ್ಗಲ್ ಗೆ ಬರುವ ಮುಖ್ಯ ರಸ್ತೆ ಮತ್ತು ಬಿದರೂರು ಗಡಿ<br>ಪೂರ್ವ: ಶರಾವತಿ ನದಿ ಮತ್ತು ವಾರ್ಡ ನಂ.01 ರ ಗಡಿ<br>ಪಶ್ಚಿಮ: ಬಿದರೂರು ಗ್ರಾಮದ ಗಡಿ | ಚೈನಾ ಗೇಟ್ ಸಾಗರ ಕಾರ್ಗಲ್ ಬೈಪಾಸ್ ರಸ್ತೆಯ ಜಂಕ್ಷನ್ ನಿಂದ ಆರಂಭಗೊಂಡು ವಾಯುವ್ಯಾಭಿಮುಖವಾಗಿ ತಿರುಗಿ ಬೈಪಾಸ್ ರಸ್ತೆಯ ಬಳಿ ದಕ್ಷಿಣಾಭಿಮುಖವಾಗಿ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು, ಮಸೀದಿ ವೃತ್ತದಲ್ಲಿ ಎಸ್. ಹೆಚ್.50 ಯನ್ನು ಸೇರಿ ಅನಂತರ ಬಿ.ಹೆಚ್. ರಸ್ತೆ 50 ರ ಮಸೀದಿ ವೃತ್ತದಿಂದ ದಕ್ಷಿಣಾಭಿಮುಖವಾಗಿ ಎಸ್. ಹೆಚ್.50 ರ ಮುಖಾಂತರ ಚಲಿಸಿ ಅಯ್ಯಪ್ಪ ಸ್ವಾಮಿ ವೃತ್ತದಲ್ಲಿ ಹಿರಿಯ ಪ್ರಾಥಮಿಕ ಶಾಲೆಯ ಪಕ್ಕದ ರಸ್ತೆಯಲ್ಲಿ ಪಶ್ಚಿಮಾಭಿಮುಖವಾಗಿ ಚಲಿಸಿ ಅನಂತರ ಶಾಲೆಯ ಹಿಂಭಾಗದಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಅನಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಕೆ.ಪಿ.ಸಿ ಕಾಲೋನಿ ರಸ್ತೆಯಲ್ಲಿ ಎಡಭಾಗದ ಕೆ.ಪಿ.ಸಿ ಕಾಲೋನಿ ಒಳಗೊಂಡು ಪುರ ಪಂಚಾಯಿತಿ ಗಡಿವರೆಗೂ ತಲುಪಿ ಅನಂತರ ಆಗ್ನೇಯಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ಎಡಭಾಗದ ಶಾಂತಿನಗರ ಕೆ.ಪಿ.ಸಿ.ಐ.ಬಿ. ಪ್ರದೇಶ, ಮತ್ತು ಬಿದರೂರುವನ್ನೊಳಗೊಂಡು ಮೂಲೆ ಮನೆ ವೃತ್ತದ ಜಂಕ್ಷನ್‌ನಲ್ಲಿ ಎಸ್.ಹೆಚ್.50 ತಲುಪಿ ಅನಂತರ ಉತ್ತರಾಭಿಮುಖವಾಗಿ ಎಸ್.ಹೆಚ್.50 ರ ಮೂಲಕ ಲಿಂಗನಮಕ್ಕಿ ಕಾರ್ಗಲ್ ಭಟ್ಕಳ್ ವೃತ್ತದಲ್ಲಿ ಪೂರ್ವಾಭಿಮುಖವಾಗಿ ಕಾರ್ಗಲ್ ನಿಂದ ಸಾಗರಕ್ಕೆ ಹೋಗುವ ಪಟ್ಟಣ ಪಂಚಾಯಿತಿ ಎದುರು ಭಾಗದ ರಸ್ತೆ ಮುಖಾಂತರ ಎಡಭಾಗದ ಗ್ಯಾರೇಜ್ ಲೈನ್ ಎನ್ ಐತ್ ಒಳಗೊಂಡು, ಹಾಗೆಯೇ ಅದೇ ರಸ್ತೆಯ ಈಶಾನ್ಯಾಭಿಮುಖವಾಗಿ ಚಲಿಸಿ ಎಡಭಾಗದ ಕೆ. ಎ.ಆರ್. ಗುಡ್ಡದ ಬಿ.ಸಿ.ಎಂ ಹಾಸ್ಟೆಲ್ ಚೌಡೇಶ್ವರಿ ದೇವಸ್ಥಾನದ ಪ್ರದೇಶ ಒಳಗೊಂಡು ಚೈನಾಗೇಟ್ ಬೈಪಾಸ್ ವೃತ್ತ ತಲುಪಿ ನಂತರ ಉತ್ತರಾಭಿಮುಖವಾಗಿ ಕಾರ್ಗಲ್ ಬೈಪಾಸ್ ರಸ್ತೆಯಲ್ಲಿ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು ಆರಂಭ ಬಿಂದು ತಲುಪುತ್ತದೆ. | ಹಿಂದುಳಿದ ವರ್ಗ–ಎ (ಮಹಿಳೆ) |
| 3 | ಜೋಗ್–ಕಾರ್ಗಲ್–3 | ಉತ್ತರ: ಅಂಬೇಡ್ಕರ್ ಕಾಲೋನಿ ಗಡಿ<br>ದಕ್ಷಿಣ: ಕಾರ್ಗಲ್ ಬಜಾರ್ ರಸ್ತೆ ಮತ್ತು ಮಸೀದಿ ರಸ್ತೆ<br>ಪೂರ್ವ: ಮಸೀದಿ ರಸ್ತೆ ಮತ್ತು ವಾರ್ಡ ನಂ.02 ರ ಗಡಿ<br>ಪಶ್ಚಿಮ: ಕಾರ್ಗಲ್ ಬಜಾರ್ ನಿಂದ ಮಾರಿಕಾಂಬಾ ರಸ್ತೆಯ ಗಡಿ ಮತ್ತು ವಾರ್ಡ ನಂ.05 ರ ಗಡಿ | ಕಾರ್ಗಲ್ ಮಸೀದಿಯಿಂದ ಆರಂಭಗೊಂಡು, ಪಶ್ಚಿಮಾಭಿಮುಖವಾಗಿ ಮಸೀದಿ ರಸ್ತೆಯಲ್ಲಿ ಚಲಿಸಿ ಅಂಬೇಡ್ಕರ್ ಕಾಲೋನಿ ಪ್ರದೇಶಗಳನ್ನೊಳಗೊಂಡು, ಮಾರಿಕಾಂಬ ರಸ್ತೆಯ ಮುಖಾಂತರ ದಕ್ಷಿಣಾಭಿಮುಖವಾಗಿ ಚಲಿಸಿ ಎಡಭಾಗದ ಪ್ರದೇಶಗಳನ್ನು ಒಳಗೊಂಡು, ಎಸ್.ಹೆಚ್.50 ನ್ನು ಪೊಲೀಸ್ ಸ್ಟೇಶನ್ ವೃತ್ತದಲ್ಲಿ ಸೇರಿ ಅನಂತರ ಎಸ್. ಹೆಚ್.50 ರಲ್ಲಿ ಆಗ್ನೇಯಾಭಿಮುಖವಾಗಿ ಚಲಿಸಿ ಮಸೀದಿ ಎಸ್.ಹೆಚ್.50 ರ ಮಸೀದಿ ವೃತ್ತದಲ್ಲಿ ಈಶಾನ್ಯಾಭಿಮುಖವಾಗಿ ಮಸೀದಿ ರಸ್ತೆಯ ಮುಖಾಂತರ ಚಲಿಸಿ ಎಡಭಾಗದ ಟ್ಯಾಂಕ್ ಏರಿಯಾ ಬೆಟ್ಟಲು ಪ್ರದೇಶಗಳನ್ನೊಳಗೊಂಡು, ಮಸೀದಿ ರಸ್ತೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ಆರಂಭದ ಬಿಂದು ತಲುಪುತ್ತದೆ. | ಸಾಮಾನ್ಯ |
| 4 | ಜೋಗ್–ಕಾರ್ಗಲ್–4 | ಉತ್ತರ: ಕಾರ್ಗಲ್ ಬಜಾರ್ ರಸ್ತೆಯಿಂದ ಕಾಂಟ್ರ್ಯಾಕ್ಟರ್ ಕಾಲೋನಿಗೆ ಹೋಗುವ ರಸ್ತೆ ಮತ್ತು ರಷ್ಯನ್ ಕಾಲೋನಿ ಡಿಷ್ ರೂಂ ಗಡಿ<br>ದಕ್ಷಿಣ: ಕಾರ್ಗಲ್ ಹಿರಿಯ ಪ್ರಾಥಮಿಕ ಶಾಲೆ (ಅಯ್ಯಪ್ಪ ಸ್ವಾಮಿ ದೇವಸ್ಥಾನ ರಸ್ತೆ) | ಎಸ್.ಹೆಚ್.50 ರಿಂದ ಕಾಂಟ್ರ್ಯಾಕ್ಟರ್ ಕಾಲೋನಿಗೆ ಹೋಗುವ ಜಂಕ್ಷನ್ ನಿಂದ ಆರಂಭಿಸಿ ಪಶ್ಚಿಮಾಭಿಮುಖವಾಗಿ ಕಾಂಟ್ರ್ಯಾಕ್ಟರ್ ಕಾಲೋನಿ ರಸ್ತೆಯಲ್ಲಿ ಚಲಿಸಿ, ಕಾಂಟ್ರ್ಯಾಕ್ಟರ್ ಕಾಲೋನಿ ಎಡಭಾಗದ ಪ್ರದೇಶವನ್ನೊಳಗೊಂಡು, ರಷ್ಯನ್ ಕಾಲೋನಿ ಪ್ರದೇಶವನ್ನೊಳಗೊಂಡು, ರಷ್ಯನ್ ಕಾಲೋನಿಯಿಂದ ಚರ್ಚ ರಸ್ತೆ ಎಡಭಾಗದ ಪ್ರದೇಶವನ್ನೊಳಗೊಂಡು, ಚರ್ಚ ರಸ್ತೆಯಿಂದ ಟ್ಯಾಂಕ್ ರಸ್ತೆಗೆ ಹೋಗುವ ಎಡಭಾಗದ ಪ್ರದೇಶವನ್ನೊಳಗೊಂಡು ವಾಟರ್ ಟ್ಯಾಂಕ್ ಗಡಿಯವರೆಗೆ ಚಲಿಸಿ ಭಾಗ್ಯ ಮಂದಿನ ಪ್ರದೇಶವನ್ನೊಳಗೊಂಡು ಪಟ್ಟಣ | ಸಾಮಾನ್ಯ |

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| | | ಪೂರ್ವ: ಬಜಾರ್ ರಸ್ತೆ ಕಾರ್ಗಲ್ ಗಣಪತಿ ದೇವಸ್ಥಾನದಿಂದ ಹಾದು ಹೋಗುವ ಮುಖ್ಯ ರಸ್ತೆ<br>ಪಶ್ಚಿಮ: ಕಾರ್ಗಲ್ ನ ಪ್ಯಾಡಿ ಫೀಲ್ಡ್ ಮತ್ತು ವಾರ್ಡ ನಂ.02 ರ ಗಡಿ | ಪಂಚಾಯಿತಿ ಗಡಿ ತಲುಪಿ ಆಗ್ನೇಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿಯ ಗಡಿ ಗುಂಟ ಎಡಭಾಗದ ಪ್ಯಾಡಿ ಫೀಲ್ಡ್ ಮತ್ತು ಚೌವಾಲಿ ಕ್ಯಾಂಪ್ ಒಳಗೊಂಡು, ನಂತರ ಕೆ.ಪಿ.ಸಿ. ಕಾಲೋನಿಯ ಸಿ ಟೈಪ್ ವಸತಿ ಗೃಹ ರಸ್ತೆಯಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ಎಡಭಾಗದ ಕೆ.ಪಿ.ಸಿ.ಸಿ. ಟೈಪ್ ವಸತಿ ಗೃಹ ಒಳಗೊಂಡು ಮುಂದುವರೆದು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯ ಬಳಿ ದಕ್ಷಿಣಾಭಿಮುಖವಾಗಿ ತಿರುಗಿ ಎಡಭಾಗದ (ಗಣಪತಿ ದೇವಸ್ಥಾನದ ಅಯ್ಯಪ್ಪ ದೇವಸ್ಥಾನದ ಪ್ರದೇಶವನ್ನೊಳಗೊಂಡು, ಪೂರ್ವಾಭಿಮುಖವಾಗಿ ಚಲಿಸಿ ಎಸ್.ಹೆಚ್.50 ಸೇರಿ ನಂತರ ಉತ್ತರಾಭಿಮುಖವಾಗಿ ತಿರುಗಿ ಎಸ್.ಹೆಚ್.50 ರ ಎಡಭಾಗದ ಪ್ರದೇಶವನ್ನೊಳಗೊಂಡು, ತದನಂತರ ಅದೇ ರಸ್ತೆಯ ಮೂಲಕ ಮಸೀದಿ ವೃತ್ತದಲ್ಲಿ ವಾಯುವ್ಯಕ್ಕೆ ತಿರುಗಿ ಹಾಗೆಯೇ ಮುಂದೆ ಚಲಿಸಿ ಕಾರ್ಗಲ್ ಬಜಾರ್ ಎಡಭಾಗದ ಪ್ರದೇಶವನ್ನೊಳಗೊಂಡು, ಮೂಲ ಬಿಂದುವನ್ನು ಸೇರುತ್ತದೆ. | |
| 05 | ಜೋಗ ಕಾರ್ಗಲ್ –5 | ಉತ್ತರ : ಸಾಗರದಿಂದ ಕಾರ್ಗಲ್‌ಗೆ ಬರುವ ಬೈಪಾಸ್ ರಸ್ತೆ ಮತ್ತು ತಲಕಳಲೆ ಅರಳೀಕಟ್ಟೆ ರಸ್ತೆ<br>ದಕ್ಷಿಣ: ಕಂಟ್ರ್ಯಾಕ್ಟರ್ ಕಾಲೋನಿ ರಸ್ತೆಯಿಂದ ಭಾಗ್ಯಮಂದಿರ ಕಾಲೋನಿ<br>ಪೂರ್ವ: ಮಾರಿಕಾಂಭ ರಸ್ತೆ ಮತ್ತು ವಾರ್ಡು ನಂ 03 ಗಡಿ<br>ಪಶ್ಚಿಮ : ಎಲ್ಲಮ್ಮ ಗುಡ್ಡದ ಗಡಿಭಾಗ ಮತ್ತು ಸ.ನಂ.63 ಗಡಿ | ಸಾಗರ ಕಾರ್ಗಲ್ ಬೈಪಾಸ್ ರಸ್ತೆಯ ಮಹಾವೀರ ವೃತ್ತದ ಹತ್ತಿರದ ಮುಂದಿನ ಸ್ಮಶಾನದ ರಸ್ತೆಗೆ ತಿರುಗುವ ರಸ್ತೆಯ ಜಂಕ್ಷನ್ ನಿಂದ ಆರಂಭಗೊಂಡು, ಪಶ್ಚಿಮಾಭಿಮುಖವಾಗಿ ಬೈಪಾಸ್ ರಸ್ತೆ ಮುಖಾಂತರ ಚಲಿಸಿ ಆಸ್ಪತ್ರೆ ಎದುರಿನ ಎಸ್.ಹೆಚ್. 50 ರ ಜಂಕ್ಷನ್ ನಲ್ಲಿ ನೈರುತ್ಯಕ್ಕೆ ತಿರುಗಿ ಎಸ್.ಹೆಚ್.50 ರ ಮೂಲಕ ಎಡಭಾಗದ ಸ್ಮಶಾನ ಪ್ರದೇಶವನ್ನೊಳಗೊಂಡು, ತಲಕಳಲೆ ವೃತ್ತ ತಲುಪಿ ನಂತರ ತಲಕಳಲೆ ರಸ್ತೆ ಮೂಲಕ ಪಶ್ಚಿಮಾಭಿಮುಖವಾಗಿ ಪಟ್ಟಣ ಪಂಚಾಯಿತಿ ಮಲ್ಕಿ ಗಡಿವರೆಗೂ ಚಲಿಸಿ ಅನಂತರ ದಕ್ಷಿಣಾಮಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿವರೆಗೂ ಚಲಿಸಿ ಅನಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ಭಾಗ್ಯ ಮಂದಿರ ಏರಿಯಾ ಜಿ.ಎಲ್.ಎಸ್. ವಾಟರ್ ಟ್ಯಾಂಕ್ ಸುತ್ತಲಿನ ಪ್ರದೇಶ ಒಳಗೊಂಡು ಪೂರ್ವಾಭಿಮುಖವಾಗಿ ಚಲಿಸಿ ಯಲ್ಲಮ್ಮ ಗುಡ್ಡದಿಂದ ಎಸ್ ಹೆಚ್ 50ರ ಮೂಲಕ ಕಂಟ್ರ್ಯಾಕ್ಟರ್ ಕಾಲೋನಿ ರಸ್ತೆಯ ಮೂಲಕ ಚಲಿಸಿ ಎಡಭಾಗದ ಪ್ರದೇಶವನ್ನೊಳಗೊಂಡು, ಎಸ್.ಹೆಚ್.50 ನ್ನು ತಲುಪಿ ಅನಂತರ ಅದೇ ರಸ್ತೆ ಮುಖಾಂತರ ಆಗ್ನೇಯಾಭಿಮುಖವಾಗಿ ಚಲಿಸಿ ಎಡಭಾಗದ 2ನೇ ಬಜಾರ್ ಪ್ರದೇಶವನ್ನೊಳಗೊಂಡು, ಪೊಲೀಸ್ ಸ್ಟೇಶನ್ ವೃತ್ತದಲ್ಲಿ ದಕ್ಷಿಣಾಭಿಮುಖವಾಗಿ ಮಾರಿಕಾಂಭ ರಸ್ತೆಯ ಮೂಲಕ ಎಡಭಾಗದ ಪ್ರದೇಶವನ್ನೊಳಗೊಂಡ ಉತ್ತರಾಭಿಮುಖವಾಗಿ ಆರಂಭ ಬಿಂದು ತಲುಪುತ್ತದೆ. | ಸಾಮಾನ್ಯ (ಮಹಿಳೆ) |
| 06 | ಜೋಗ ಕಾರ್ಗಲ್ –6 | ಉತ್ತರ : ಜೋಗ ಶಿರೂರು ಕೆರೆ ಪಂಪ್ ಹೌಸ್‌ನಿಂದ ವರ್ಕಮನ್ ಬ್ಲಾಕ್ ಅರಳಿ ಮರದ ಗಡಿ<br>ದಕ್ಷಿಣ: ಕಾರ್ಗಲ್ ತಲಕಳಲೆ ವೃತ್ತದಿಂದ ತಲಕಳಲೆ ಡ್ಯಾಂ ಗೆ ಹೋಗುವ ಮುಖ್ಯರಸ್ತೆ<br>ಪೂರ್ವ: ತಲಕಳಲೆ ಸರ್ಕಲ್ ನಿಂದ ಜೋಗ ಫಾಲ್ಸ್ ಗೆ ಹೋಗುವ ಮುಖ್ಯರಸ್ತೆ ಶಿರೂರು ಕೆರೆ ಸರ್ಕಲ್ | ಎಸ್.ಹೆಚ್.50 ರ ತೂಗು ಸೇತುವೆ ವೃತ್ತದಿಂದ ಆರಂಭವಾಗಿ ಪಶ್ಚಿಮಾಭಿಮುಖವಾಗಿ ಚಲಿಸಿ ವರ್ಕಮನ್ ಬ್ಲಾಕ್ ರಸ್ತೆಯ ಮುಖಾಂತರ ಚಲಿಸಿ, ಎಡಭಾಗದ ಪ್ರದೇಶವನ್ನೊಳಗೊಂಡು, ಈಶ್ವರ ದೇವಸ್ಥಾನ ಪ್ರದೇಶವನ್ನೊಳಗೊಂಡು ವರ್ಕಮನ್ ಬ್ಲಾಕ್‌ನ ರಸ್ತೆಯ ಮುಖಾಂತರ ಚಲಿಸಿ ವರ್ಕಮನ್ ಬ್ಲಾಕ್‌ನ ಶಾಲಾ ಪ್ರದೇಶಗಳನ್ನು ಮತ್ತು ಆಶ್ರಮ ಕಾಲೋನಿ ಪ್ರದೇಶವನ್ನೊಳಗೊಂಡು ಹಾಗೇಯೇ ಮುಂದುವರೆದು ರೆಡ್ಡಿ ಬ್ಲಾಕ್ ಪ್ರದೇಶ ಹೊರತಾದ ತಗ್ಗು ಪ್ರದೇಶವನ್ನೊಳಗೊಂಡು ಜಿ ಟೈಪ್ ವಸತಿ ಸಮುಚ್ಚಯದ ಎದುರಿನ ಪ್ರದೇಶವನ್ನೊಳಗೊಂಡು ದಕ್ಷಿಣಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಗಡಿ ಗುಂಟ ಚಲಿಸಿ ನಂತರ ಈಶಾನ್ಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಪ್ರದೇಶ ತಲಕಳಲೆ ಕಾರ್ಗಲ್ ರಸ್ತೆಯ ಮುಖಾಂತರ ಮಲ್ಲಕ್ಕಿ ಪ್ರದೇಶವನ್ನೊಳಗೊಂಡು, ಹರಿಗೆ ಗದ್ದೆ, ಶನಿ | ಹಿಂದುಳಿದ ವರ್ಗ–ಎ |

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| | | ಪಶ್ಚಿಮ : ದೇವರಮಕ್ಕಿ ಈಶ್ವರ ದೇವಸ್ಥಾನದ ಗಡಿ | ಗದ್ದೆ, ದೇವರಮಕ್ಕಿ ಪ್ರದೇಶವನ್ನೊಳಗೊಂಡು, ಪೂರ್ವಾಭಿ ಮುಖವಾಗಿ ಚಲಿಸಿ ತಲಕಳಲೆ ವೃತ್ತ ತಲುಪಿ ಆನಂತರ ಈಶಾನ್ಯಾಭಿಮುಖವಾಗಿ ಎಸ್.ಹೆಚ್.50 ರ ಮೂಲಕ ಚಲಿಸಿ ಪ್ರಾಥಮಿಕ ಆರೋಗ್ಯ ಕೇಂದ್ರ ಜಂಕ್ಷನ್ ಮೂಲಕ ಎಡಪ್ರದೇಶವನ್ನೊಳಗೊಂಡು, ಅದೇ ರಸ್ತೆಯ ಮೂಲಕ ಉತ್ತರಾಭಿಮುಖವಾಗಿ ಚಲಿಸಿ ಅರಣ್ಯ ಇಲಾಖೆ ಕಛೇರಿ ಚಪ್ಪಗಾರು ಸರ್ವೇ ನಂಬರ್ 1 ಸ್ಮಶಾನ ಸೇರಿಕೊಂಡು, ಶಿರೂರು ಕೆರೆ ವೃತ್ತ ಆರಂಭ ಬಿಂದು ತಲುಪುತ್ತದೆ. | |
| 07 | ಜೋಗ ಕಾರ್ಗಲ್ –7 | ಉತ್ತರ : ಜೋಗ ಬಜಾರ್ ರಸ್ತೆ ಮತ್ತು ಗಾಂಧಿ ಪಾರ್ಕ ನಿಂದ ವರ್ಕ ಮನ್ ನಿಂದ ವರ್ಕ ಮನ್ ಬ್ಲಾಕ್‌ಗೆ ಬರುವ ರಸ್ತೆ<br>ದಕ್ಷಿಣ: ಬೈಪಾಸ್ ರಸ್ತೆಯಿಂದ ಶಿರೂರುಕೆರೆ ಸರ್ಕಲ್ ಮತ್ತು ವರ್ಕಮನ್ ಬ್ಲಾಕ್ ನಿಂದ ಅರಳಿಮನೆ<br>ಪೂರ್ವ: ಶರಾವತಿ ನದಿ ದಂಡೆ<br>ಪಶ್ಚಿಮ : ಹೆಲ್ತ್ ಕ್ಯಾಂಪ್ ಮತ್ತು ಆಶ್ರಯ ಕಾಲೋನಿ ಗಡಿ | ಯೂತ್ ಹಾಸ್ಟೆಲ್ ವೃತ್ತದಿಂದ ಆರಂಭಗೊಂಡು ಪಶ್ಚಿಮಾಭಿಮುಖವಾಗಿ ಜೋಗ ಬಜಾರ್ ರಸ್ತೆಯ ಮುಖಾಂತರ ಪಶ್ಚಿಮಾಭಿಮುಖವಾಗಿ ಚಲಿಸಿ ಎಡಭಾಗದ ಮಲಬಾರ್ ಕ್ಯಾಂಪ್ ಮತ್ತು ಬಜಾರ್ ಎಡಭಾಗದ ಪ್ರದೇಶಗಳನ್ನು ಒಳಗೊಂಡು ಎಂ.ಜಿ. ಪಾರ್ಕ ವೃತ್ತದಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ರೆಡ್ಡಿ ಬ್ಲಾಕ್ ರಸ್ತೆ ಮುಖಾಂತರ ರೆಡ್ಡಿ ಬ್ಲಾಕ್ ಹೊರತು ಪಡಿಸಿದ ಪೂರ್ವಾಭಿಮುಖವಾಗಿ ಚಲಿಸಿ ವರ್ಕಮನ್ ಬ್ಲಾಕ್ ಅರಳಿಮರದ ವೃತ್ತದ ಹೆಲ್ತ್ ಕ್ಯಾಂಪ್ ಮತ್ತು ವರ್ಕಮನ್ ಬ್ಲಾಕ್ ಪಶ್ಚಿಮ ಏರಿಯಾ ಚಾಮುಂಡೇಶ್ವರಿ ದೇವಸ್ಥಾನದ ಪ್ರದೇಶವನ್ನೊಳಗೊಂಡು, ಪೂರ್ವಾಭಿಮುಖವಾಗಿ ಚಲಿಸಿ ಮುಂದುವರೆದು ವರ್ಕಮನ್ ರಸ್ತೆಯ ಮುಖಾಂತರ ಬ್ಯಾಲೆನ್ಸಿಂಗ್ ರಿಜರ್ವರ್ ತೂಗುಸೇತುವೆಯ ಪ್ರದೇಶವನ್ನೊಳಗೊಂಡು ಆನಂತರ ತೂಗು ಸೇತುವೆಯಿಂದ ದಕ್ಷಿಣಕ್ಕೆ ತಿರುಗಿ ಎಸ್.ಹೆಚ್.50ರ ಮೂಲಕ ಜೋಗ ನಿಂದ ಕಾರ್ಗಲ್‌ಗೆ ಹೋಗುವ ರಸ್ತೆಯಲ್ಲಿ ಚಲಿಸಿ ನಂತರ ಆಸ್ಪತ್ರೆ ಎದುರಿನ ಬೈಪಾಸ್ ವೃತ್ತದ ಜಂಕ್ಷನ್ ಬಳಿ ಪೂರ್ವಕ್ಕೆ ತಿರುಗಿ ಕಾರ್ಗಲ್‌ನಿಂದ ಸಾಗರಕ್ಕೆ ಹೋಗುವ ಬೈಪಾಸ್ ರಸ್ತೆ ಮುಖಾಂತರ ಹಾದು ಎಡಭಾಗದ ಜಾಲಿ ಗದ್ದೆ ಪ್ರದೇಶಗಳನ್ನು ಒಳಗೊಂಡು, ಅನಂತರ ಅದೇ ರಸ್ತೆಯ ಮುಖಾಂತರ ಆಗ್ನೇಯಾಭಿಮುಖವಾಗಿ ಚಲಿಸಿ ಚೈನಾ ಗೇಟ್ ಬಳಿಯ ಬೈಪಾಸ್ ವೃತ್ತದ ಮುಖಾಂತರ ಶರಾವತಿ ನದಿ ದಂಡಿ ತಲುಪಿ ಅನಂತರ ಉತ್ತರಾಭಿಮುಖವಾಗಿ ಶರಾವತಿ ನದಿಯ ದಂಡೆಯಂಚಿನಲ್ಲಿ ಚಲಿಸಿ ಎಡಬಾಗದ ಪ್ರದೇಶಗಳಾದ ಗೀಳಾಲ ಗಂಡಿ ಒಳಗೊಂಡು, ತೂಗು ಸೇತುವೆಗೆ ಸಮಾನಾಂತರ ದೂರಕ್ಕೆ ತಲುಪಿ ನಂತರ ಪಶ್ಚಿಮಾಭಿಮುಖವಾಗಿ ಚಲಿಸಿ ತೂಗು ಸೇತುವೆ ತಲುಪಿ ಅದರ ಮುಖಾಂತರ ಹಾದು ನಂತರ ಉತ್ತರಾಭಿಮುಖವಾಗಿ ರಾಜ್ಯ ಹೆದ್ದಾರಿ 50 ರ ಮುಖಾಂತರ ಯೂತ್ ಹಾಸ್ಟೆಲ್ ವೃತ್ತದ ಆರಂಭಬಿಂದು ತಲುಪುತ್ತದೆ. | ಸಾಮಾನ್ಯ (ಮಹಿಳೆ) |
| 8 | ಜೋಗ ಕಾರ್ಗಲ್ –8 | ಉತ್ತರ : ಜೋಗ ಫಾಲ್ಸ್ ನಿಂದ ಶರಾವತಿ ನದಿ ದಂಡೆ ಮತ್ತು ಸೀತಾ ಕಟ್ಟೆ ಸೇತುವೆಯಿಂದ ಎಂ ಜಿ ಹೆಚ್ ಪವರ್ ಸ್ಟೇಶನ್ ಗಡಿ<br>ದಕ್ಷಿಣ: ತೂಗು ಸೇತುವೆಯಿಂದ ಯೂತ್ ಹಾಸ್ಟೆಲ್ ಮತ್ತು ಬಜಾರ್ ರಸ್ತೆ ಹಾಗೂ ಜೋಗ್ ಫಾಲ್ಸ ನಿಂದ ಎಸ್ ವಿ ಪಿ ಹೋಗುವ ರಸ್ತೆ | ಸೀತಾಕಟ್ಟೆ ಸೇತುವೆಯ ಆರಂಭಿಸಿ ಪಶ್ಚಿಮಾಭಿಮುಖವಾಗಿ ಚಲಿಸಿ ಶರಾವತಿ ನದಿಯ ಅಂಚಿನ ಎಡಭಾಗದ ವಸತಿ ಗೃಹದ ಎಂ.ಜಿ.ಹೆಚ್ ಎಡಭಾಗ ಸೇರಿಕೊಂಡಂತೆ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮುಂಭಾಗದ ರಸ್ತೆಯ ಎಡಬದಿಯ ಪ್ರದೇಶ ಕೆ.ಪಿ.ಸಿ ಆಸ್ಪತ್ರೆ ಪ್ರದೇಶ ಒಳಗೊಂಡು, ಶಾಲೆಯ ಆಟದ ಮೈದಾನದ ಎದುರಿಗೆ ಪೂರ್ವಾಭಿಮುಖವಾಗಿ ಚಲಿಸಿ ಎಸ್.ಇ. ಮೌಂಟ್ ರಾಜ್ ಸೀಟ್ ಪ್ರದೇಶಗಳನ್ನು ಒಳಗೊಂಡು ಎಸ್.ವಿ. ಪಿ. ಮುಖ್ಯ ರಸ್ತೆಯ ಎಡಭಾಗದ ಪ್ರದೇಶಗಳನ್ನು ಒಳಗೊಂಡು ಎಂ.ಜಿ.ಹೆಚ್. ವೃತ್ತದ ಮೂಲಕ ಆಗ್ನೇಯಕ್ಕೆ ತಿರುಗಿ ಜೋಗ ಬಜಾರ್ ಲೈನ್ ರಸ್ತೆ ಮೂಲಕ ಐ.ಹೆಚ್.ಬಿ. ಕ್ಯಾಂಪ್ ಕ್ರಿಸ್ತ ದೇವಾಲಯದ ಎಡಭಾಗ ಹಾಗೂ ವಿ.ವಿ.ಎನ್.ಎಲ್.ಪಿ.ಯು ಕಾಲೇಜ್ ರಸ್ತೆಯ ಕ್ರೈಸ್ತ ದೇವಾಲಯ ಒಳಗೊಂಡು ಪ್ರದೇಶ ಎಸ್.ಹೆಚ್.50 ಯ ಯೂತ್ ಹಾಸ್ಟೆಲ್ ವೃತ್ತದಲ್ಲಿ | ಸಾಮಾನ್ಯ (ಮಹಿಳೆ) |

| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| | | ಪೂರ್ವ: ಶರಾವತಿ ನದಿ ದಂಡೆ ಹಾಗೂ ರಿಜರ್ವ ಕ್ಯಾಂಪ್ ಗಡಿ<br>ಪಶ್ಚಿಮ : ಎಸ್ ವಿ ಪಿ ಮುಖ್ಯ ರಸ್ತೆಯಿಂದ ಹಿರಿಯ ಪ್ರಾಥಮಿಕ ಶಾಲೆ ಮುಂಭಾಗ ಹಾದು ಹೋಗುವ ರಸ್ತೆ ಗಡಿ | ದಕ್ಷಿಣಾಭಿಮುಖವಾಗಿ ಚಲಿಸಿ ತೂಗು ಸೇತುವೆ ಉದ್ದಕ್ಕೂ ಚಲಿಸಿ ಜೋಗ ಫಾಲ್ಸ್ ಒಳಗೊಂಡಂತೆ ಹಾಗೂ ಎಡಭಾಗದ ಪಿ.ಡಬ್ಲ್ಯೂಡಿ. ಪ್ರದೇಶ ಮೇಲೆ ಚಲಿಸಿ ನಂತರ ದಕ್ಷಣಾಭಿಮುಖವಾಗಿ ತಿರುಗಿ ನದಿ ದಂಡೆಯ ಎಡಭಾಗದ ಪ್ರದೇಶ ಒಳಗೊಂಡು ಸೀತಾ ಕಟ್ಟೆ ಸೇತುವೆಗೆ ಬಂದು ಸೇರುತ್ತದೆ. | |
| 9. | ಜೋಗ್–ಕಾರ್ಗಲ್–9 | ಉತ್ತರ: ಗಾಂಧಿ ಪಾರ್ಕ ನಿಂದ ಎಸ್.ವಿ.ಪಿ. ಹೋಗುವ ಮುಖ್ಯ ರಸ್ತೆ<br>ದಕ್ಷಿಣ: ಹೆಲ್ತ್ ಕ್ಯಾಂಪ್ ಆಶ್ರಯ ಕಾಲೋನಿ ಗಡಿ<br>ಪೂರ್ವ: ಗಾಂಧಿ ಪಾರ್ಕ ನಿಂದ ರಾಮ ಮಂದಿರ ರೆಡ್ಡಿ ಬ್ಲಾಕ್ ಗಡಿ<br>ಪಶ್ಚಿಮ: ಎಸ್.ವಿ.ಪಿ. ಎಸ್.ಬಿ.ಎಂ. ಬ್ಯಾಂಕ್ ಮತ್ತು ಆಟದ ಮೈದಾನ ಮತ್ತು ಜಿ.ಟೈಪ್ ಗಡಿ | ಗಾಂಧಿ ಪಾರ್ಕ ವೃತ್ತದಿಂದ ಆರಂಭಗೊಂಡು ವಾಯುವ್ಯಾಭಿಮುಖವಾಗಿ ಚಲಿಸಿ SVP ರಸ್ತೆ ಮುಖಾಂತರ ಹಾದು ಎಂ.ಜಿ.ಎಂ. ಪಾರ್ಕ ವೃತ್ತದಿಂದ ಆರಂಭಗೊಂಡು ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ಅದೇ ರಸ್ತೆಯ ಮುಖಾಂತರ ವಾಯುವ್ಯಾಭಿಮುಖವಾಗಿ ಚಲಿಸಿ ಅದೇ ರಸ್ತೆಯ ಮುಖಾಂತರ ದಕ್ಷಿಣಕ್ಕೆ ತಿರುಗಿ ಎದುರಿನ ಅಂಚೆ ಕಛೇರಿಯ ರಸ್ತೆ ಮುಖಾಂತರ ಅಂಚೆ ಕಚೇರಿಯ ಪಕ್ಕದ ಭೂತರಾಯನ ದೇವಸ್ಥಾನ ಸೇರಿದಂತೆ ಆಟದ ಮೈದಾನದ ಎಡ ಮತ್ತು ಬಲ ಭಾಗದ ಪ್ರದೇಶಗಳನ್ನು ಒಳಗೊಂಡು ಹಾಗೂ ಜಿ ಟೈಪ್ ವಸತಿ ಗೃಹ ಒಳಗೊಂಡು ಎದುರಿನ ಟಿ.ಎಂ. ಶೆಡ್ ಮತ್ತು ರೆಡ್ಡಿ ಬ್ಲಾಕ್ ಪ್ರದೇಶಗಳನ್ನೊಳಗೊಂಡು ರೆಡ್ಡಿ ಬ್ಲಾಕ್ ರಸ್ತೆಯ ಎಡ ಮತ್ತು ಬಲ ಭಾಗದ ವ್ಯಾಪ್ತಿಯ ಪ್ರದೇಶಗಳನ್ನೊಳಗೊಂಡು ಟಿ.ಎಂ. ಶೆಡ್ ನಿಂದ ಎಂ.ಜಿ. ಪಾರ್ಕ ರಸ್ತೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ಎಂ.ಜಿ. ಪಾರ್ಕ ವೃತ್ತದ ಆರಂಭ ಬಿಂದುವನ್ನು ತಲುಪುತ್ತದೆ. | ಸಾಮಾನ್ಯ |
| 10. | ಜೋಗ್–ಕಾರ್ಗಲ್–10 | ಉತ್ತರ: ಶರಾವತಿ ನದಿ ದಂಡೆ ಮತ್ತು ಎಬಿ ಸೈಟ್ ವರೆಗೆ<br>ದಕ್ಷಿಣ: ದೇವರ ಮಕ್ಕಿ ಗಡಿ<br>ಪೂರ್ವ: ಈಶ್ವರ ದೇವಸ್ಥಾನದ ಗಡಿ<br>ಪಶ್ಚಿಮ: ಕಣೇಕಾರ್ ಮತ್ತು ಎಸ್.ವಿ.ಪಿ. ಯಿಂದ ಹೆನ್ನಿಗೆ ಹೋಗುವ ರಸ್ತೆ | ಶರಾವತಿ ನದಿ ಕಣಿವೆಯ ಎಂ.ಜಿ.ಹೆಚ್. ವಿದ್ಯುದಾಗಾರದಿಂದ ಪ್ರಾರಂಭಗೊಂಡು ಪಶ್ಚಿಮಾಭಿಮುಖವಾಗಿ ಚಲಿಸಿ ನಂತರ ವಾಯುವ್ಯಕ್ಕೆ ತಿರುಗಿ ನದಿ ದಂಡೆಯಲ್ಲಿಯೇ ಹಾದು ತಿರುಗಿ ನದಿ ದಂಡೆಯವರೆಗೂ ಚಲಿಸಿ ಆನೆಬೈಲು ಪ್ರದೇಶದ ಶರಾವತಿ ವಿದ್ಯುದಾಗಾರದಿಂದ ದಕ್ಷಿಣಕ್ಕೆ ಹೆನ್ನೆ ರಸ್ತೆ ಸೇರುವ ಎಡಭಾಗದ ಪ್ರದೇಶಗಳನ್ನೊಳಗೊಂಡ ಬ್ರಿಡ್ಜ್ ಗೇಟಿನ ಮುಖಾಂತರ ದಕ್ಷಿಣಕ್ಕೆ ತಿರುಗಿ ಹೆನ್ನಿ ಎಸ್.ವಿ.ಪಿ. ರಸ್ತೆ ಮುಖಾಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯ್ತಿ ಗಡಿಯೊಳಗಿನ ಕಣೆಕರ, ಪಾತಿಮಾಪುರ,II ಮೌಂಟ್ ಪ್ರದೇಶಗಳನ್ನೊಳಗೊಂಡ ಕೆ.ಪಿ.ಸಿ. ಕಛೇರಿ ಒಳಗೊಂಡ ಅಂಚೆ ಕಚೇರಿ ರಸ್ತೆ ಮುಖಾಂತರ ಎಸ್.ವಿ.ಪಿ ಮುಖ್ಯ ರಸ್ತೆಗೆ ಸೇರುವ ಎಡಭಾಗದ ಪ್ರದೇಶ ಒಳಗೊಂಡು ಎಸ್.ವಿ.ಪಿ. ಸರ್ಕಾರಿ ಶಾಲೆಯ ಮುಂಭಾಗದ ರಸ್ತೆಯಲ್ಲಿ ಉತ್ತರಾಭಿಮುಖವಾಗಿ ಶಾಲೆಯನ್ನು ಒಳಗೊಂಡು ಚರ್ಚ ಮೌಂಟ್ ಪ್ರದೇಶ ಒಳಗೊಂಡು ಎಂ.ಜಿ.ಹೆಚ್. ವಿದ್ಯುದಾಗಾರದಲ್ಲಿ ಮೂಲಬಿಂದು ಸೇರುತ್ತದೆ. | ಪರಿಶಿಷ್ಟ ಜಾತಿ |
| 11 | ಜೋಗ ಕಾರ್ಗಲ್ –11 | ಉತ್ತರ : ಶರಾವತಿ ನದಿದಂಡೆ | ರಾಜ್ ಸೀಟ್ ಆನೇಬೈಲ್ ವಿದ್ಯುದಾಗಾರದಿಂದ ಪ್ರಾರಂಭಗೊಂಡು ಪಶ್ಚಿಮಾಭಿಮುಖವಾಗಿ ಚಲಿಸಿ ಶರಾವತಿ ಎಡದಂಡೆಯ ಎಡಭಾಗದ ಪ್ರದೇಶಗಳನ್ನೊಳಗೊಂಡು ನಂತರ ದಕ್ಷಣಾಭಿಮುಖವಾಗಿ ಚಲಿಸಿ ನಂತರ ಪಟ್ಟಣ ಪಂಚಾಯಿತಿ ಗಡಿವರೆಗೆ ಚಲಿಸಿ ನಂತರ ಪೂರ್ವಾಭಿಮುಖವಾಗಿ ಪಟ್ಟಣ ಪಂಚಾಯಿತಿ ಗಡಿ (ತಳಕಳಲೆ ಸ.ನಂ. 116, 117,118) ಹೆನ್ನಿ ಮರಾಠ ಕೇರಿ ಗುಂಡಿ ಬೈಲು ಪ್ರದೇಶವನ್ನೊಳಗೊಂಡು ಆನಂತರ ಆಗ್ನೇಯಾಭಿಮುಖವಾಗಿ ಚಲಿಸಿ ಪಟ್ಟಣ ಪಂಚಾಯಿತಿ ಗಡಿವರೆಗಿನ ಸುಂಕದ ಮನೆ ಹಗರೆ ಹತ್ತಿಗೂಡು ಪ್ರದೇಶಗಳನ್ನೊಳಗೊಂಡು ಸರ್ವೆ ನಂಬರ್ 74/156 ತದನಂತರ ಆಗ್ನೇಯಮುಖವಾಗಿ ಚಲಿಸಿ ಕಣೆಕರ್ ಗಡಿಯಿಂದ ಉತ್ತರಕ್ಕೆ ತಿರುಗಿ | ಪರಿಶಿಷ್ಟ ಪಂಗಡ (ಮಹಿಳೆ) |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ವಾರ್ಡ್ ನಂಬರ್ ಮತ್ತು ಹೆಸರು | ಚೆಕ್ ಬಂದಿ (ಮೇರೆ ಗುರುತು) | ವಾರ್ಡ್ ರನ್ನಿಂಗ್ ಬೌಂಡರಿ | ಮೀಸಲಾತಿ |
|---|---|---|---|---|
| | | | ಬ್ರಿಡ್ಜ್ ಗೇಟ್ ಮುಖಾಂತರ ಎಸ್.ವಿ.ಪಿ. ಯಿಂದ ಹೆನ್ನಿ ರಸ್ತೆಯ ಎಡಭಾಗದ ತಲಕಳಲೆ ಪ್ರದೇಶ ಒಳಗೊಂಡು ರಾಜ್ ಸೀಟ್‌ನ ಶರಾವತಿ ವಿದ್ಯುದಾಗಾರಕ್ಕೆ ಬಂದು ಸೇರುವ ಎಡಭಾಗದ ಪ್ರದೇಶವನ್ನೊಳಗೊಂಡು ಮೂಲ ಬಿಂದು ತಲುಪುತ್ತದೆ. | |

**ಸಿದ್ಧಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜುಲೈ ೮, ೨೦೧೪ (ಆಷಾಡ ೧೭, ಶಕ ವರ್ಷ ೧೯೩೬) | ನಂ. ೪೫೦ |
|---|---|---|
| **Part – IV-A** | **Bangalore, Tuesday, July 8, 2014 (Ashadha 17, Shaka Varsha 1936)** | **No. 450** |

## ಸಹಕಾರ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಇ 269 ಎಂಆರ್‌ಇ 2014, ಬೆಂಗಳೂರು, ದಿನಾಂಕ: 04–07–2014

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 102** ಹಾಗೂ ನಿಯಮಾವಳಿಗಳು, 1968ರ ನಿಯಮ 88ಐರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಪಿ.ಎಸ್. ವಸ್ತ್ರದ ಆದ ನಾನು, ಚಾಮರಾಜನಗರ ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರ ಸಂ. | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 01 | ಚಾಮರಾಜನಗರ | ಶ್ರೀ ಸಿ. ರಾಜಶೇಖರ್,<br>ಅಧ್ಯಕ್ಷರು,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,<br>ಚಾಮರಾಜನಗರ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59